ಕಾಯಕವೇ ಕೈಲಾಸ



# ಸಿದ್ಧಗಂಗಾ



ಕನ್ನಡ ರಾಜ್ಯೋತ್ಸವದ
ಹಾರ್ದಿಕ ಶುಭಾಶಯಗಳು

ಸಂಪುಟ : ೫೫ ನವೆಂಬರ್ ೨೦೧೯ ಸಂಚಿಕೆ : ೧೧



ಆಕ್ಟೋಬರ್ ೧೨ ರಂದು, ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದ ಪಂಡಿತ ಚೆನ್ನಪ್ಪ ಎರೇಸೀಮೆಯವರ ಜನ್ಮಶತಮಾನೋತ್ಸವ ಸಮಾರಂಭವನ್ನು ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು ಉಪಸ್ಥಿತರಿದ್ದರು




ತುಮಕೂರು ರಸ್ತೆ ಹಾಗೂ ಮೇಲುಸೇತುವೆಗೆ ಪರಮಪೂಜ್ಯ ಶ್ರೀ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮೀಜಿ ಅವರ ಹೆಸರು ನಾಮಕರಣ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಬಿ.ಬಿ.ಎಂ.ಪಿ. ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ತುಮಕೂರು ಬಿ.ಹೆಚ್.ರಸ್ತೆಯಲ್ಲಿ ಪೈ ಇಂಟರ್‌ನ್ಯಾಷನಲ್ ಮಳಿಗೆಯನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಅರೆಮೇರಿ ಮಠದ ಶ್ರೀ ಶ್ರೀ ಶಾಂತಾ ಮಲ್ಲಿಕಾರ್ಜುನ ಸ್ವಾಮಿಗಳವರು, ಸಂಸ್ಥೆಯ ಮುಖ್ಯಸ್ಥ ಶ್ರೀ ಎಸ್. ರಾಜ್‌ಕುಮಾರ್ ಪೈ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ


ಸಂಪುಟ : ೫೫ ನವೆಂಬರ್ ೨೦೧೯ ಸಂಚಿಕೆ : ೧೧

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು

ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು :
ಕೆ.ಎಸ್. ಉಮಾಮಹೇಶ್, ಕೆ.ಬಿ. ಶಿವಶಂಕರಯ್ಯ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ವಿ. ಸೋಮಶೇಖರಯ್ಯ
ಎನ್.ವಿ. ಸತೀಶ್‌ಕುಮಾರ್

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ ..................




ಚಂದಾ ವಿವರ :
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00





# ಪ್ರಧಾನ ಸಂಪಾದಕರ ನುಡಿ........

'ನಾಡಿನ ಪುಣ್ಯದ ಪೂರ್ವದಿಗಂತದಿನದ ಅರುಣೋದಯವಾಗುತಿದೆ'. 'ಉದಯವಾಗಲಿ ಚೆಲುವ ಕನ್ನಡನಾಡು' ಎಂದರು ಹುಯಿಲುಗೋಳ ನಾರಾಯಣರಾಯರು. 'ಕನ್ನಡ ಕನ್ನಡ ಹಾ ಸವಿಗನ್ನಡ' ಎಂದರು ಇನ್ನೊಬ್ಬರು. ಕರ್ನಾಟಕದ ಏಕೀಕರಣಕ್ಕೆ ದುಡಿದವರು ಮಹನೀಯರು ಹಲವರು. ಕರ್ಣಾಟಕವನ್ನು ಆಳಿದ ಎಲ್ಲಾ ಮುಖ್ಯಮಂತ್ರಿಗಳೂ ಅವರ ಸಚಿವಮಂಡಲಗಳೂ ಕನ್ನಡಕ್ಕೆ ಸೇವೆ ಸಲ್ಲಿಸಿದರು. ಕನ್ನಡ ಸಾಹಿತ್ಯ ಪರಿಷತ್ತೂ; ಅದರ ಅಧ್ಯಕ್ಷರಾಗಿದ್ದ ಎಲ್ಲರೂ ಇಂದಿನ ಅಧ್ಯಕ್ಷರಾಗಿರುವ ಶ್ರೀ ಮನುಬಳಿಗಾರರೂ ತುಂಬಾ ದುಡಿಯುತ್ತಿರುವುದು ಅಭಿನಂದನೀಯವಾದುದಾಗಿದೆ. ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯವೇ ಇದ್ದು ಅದರ ಕುಲಪತಿಗಳಾಗಿ ಸೇವೆ ಸಲ್ಲಿಸಿದ ಎಲ್ಲರೂ ಸ್ಮರಣೀಯರು. ಸರ್ಕಾರವೇ ಕನ್ನಡ ಪಂಡಿತ ಪರಿಷತ್ ಕಾಲೇಜನ್ನು ಮುಚ್ಚಿದರೂ ಶ್ರೀ ಸಿದ್ಧಗಂಗಾಮಠ ಕನ್ನಡ ಪಂಡಿತ ಇಂಟಿಗ್ರೇಟೆಡ್ ಕಾಲೇಜನ್ನು ನಡೆಸುತ್ತಾ ಬಂದಿರುವುದು ಅಭಿನಂದನೀಯ.

ಶ್ರೀ ಸಿದ್ಧಗಂಗಾ ಮಠದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಗೆ ಮರಣೋತ್ತರವಾಗಿಯಾದರೂ 'ಭಾರತರತ್ನ' ರಾಷ್ಟ್ರೀಯ ಪ್ರಶಸ್ತಿಯನ್ನು ನೀಡಬೇಕು ಎಂದು ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಸಿದ್ಧರಾಮಯ್ಯನವರು ಮತ್ತು ಕೇಂದ್ರ ಸರ್ಕಾರದಲ್ಲಿ ಸಚಿವರಾಗಿರುವ ಶ್ರೀ ಸದಾನಂದಗೌಡರವರು ಹೇಳಿರುವುದು ಮೆಚ್ಚುವಂಥದಾಗಿದೆ. ಇಡೀ ಕರ್ನಾಟಕವೇ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಾರತರತ್ನ ಪ್ರಶಸ್ತಿ ನೀಡುವುದನ್ನು ಆಸೆಯ ಕಣ್ಣುಗಳಿಂದ ನೋಡುತ್ತಿದೆ.

ಪರಮಪೂಜ್ಯ ಶ್ರೀ ಶ್ರೀಗಳವರು ಹಸಿದ ಹೊಟ್ಟೆಗಳಿಗೆ ಅನ್ನವಿತ್ತು ಸಲಹುತ್ತ ಬಂದ ಪೂಜ್ಯರು ಶ್ರೀಮಠಕ್ಕೆ ಯಾರೇ ಬರಲಿ ಅವರಿಗೆ ಪೂಜ್ಯರು ಹೇಳುತ್ತಿದ್ದ ಮೊದಲ ಮಾತು 'ಮೊದಲು ಪ್ರಸಾದ ಮಾಡಿಕೊಂಡು ಬನ್ನಿ' ಎಂದು. ಕಾವಿಕಾಷಾಯಾಂಬರಕ್ಕೆ ಗೌರವದ ಗರಿ ಮುಡಿಸಿರುವವರು ಪೂಜ್ಯರು. ಕರ್ನಾಟಕದ ಎಲ್ಲ ಮಠಗಳ ಪೂಜ್ಯ ಮಠಾಧೀಶರಿಂದ ಗೌರವಾದರಗಳಿಗೆ ಪಾತ್ರರಾದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ 'ಭಾರತರತ್ನ' ರಾಷ್ಟ್ರೀಯ ಪ್ರಶಸ್ತಿ ಕೊಡಬೇಕೆಂಬುದೇ ಇಚ್ಛೆ. ಶ್ರೀಗಳವರು ಕೇವಲ 'ಭಾರತರತ್ನ' ರಷ್ಟೇ ಅಲ್ಲ ಅವರು 'ವಿಶ್ವರತ್ನ'ರೇ ಆಗಿದ್ದಾರೆ.

**ಸಿದ್ಧಗಂಗಾ ಪತ್ರಿಕೆಯ ಚಂದಾದಾರರಿಗೆ, ಅಭಿಮಾನಿಗಳಿಗೆ,**
**ಕನ್ನಡ ರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳು**

ಪ್ರೊ. ಹೆಚ್.ವಿ. ವೀರಭದ್ರಯ್ಯ
ಪ್ರಧಾನ ಸಂಪಾದಕರು





# ಶ್ರೀವಾಣಿ

ಜಗತ್ತಿನ ಅನೇಕ ರಾಷ್ಟ್ರಗಳು ಕತ್ತಲಲ್ಲಿ ತೊಳಲಾಡುತ್ತಿದ್ದಾಗ ಜ್ಞಾನದ ಬೆಳಕಿನ ಜೀವನಶೈಲಿಯನ್ನು ತೋರಿಸಿದ್ದು ಸಂಸ್ಕೃತ ಭಾಷೆ. ಭಾರತೀಯ ಸಂಸ್ಕೃತಿಯ ರತ್ನಗಣಿ 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿತ್ ಜಗತ್ಯಾಂ ಜಗತ್' ಎಂದು ಆಧ್ಯಾತ್ಮಿಕ ಸತ್ಯದರ್ಶನವನ್ನು ಅನಾವರಣ ಮಾಡಿದ ಪ್ರಬುದ್ಧ ಚಿಂತನೀಯ ವಿಚಾರರಶ್ಮಿಗಳನ್ನು ಎಲ್ಲೆಡೆಗೆ ಬೀರಿದ ಸಂಸ್ಕೃತ ಭಾಷೆ ಇಹಪರ, ವ್ಯಷ್ಟಿ, ಸಮಷ್ಟಿ, ಧರ್ಮ, ನೀತಿ, ನ್ಯಾಯ, ಕಲೆ, ಸಾಹಿತ್ಯ, ಸಂಗೀತ, ಶಿಲ್ಪಶಾಸ್ತ್ರ, ಅರ್ಥ, ಆಡಳಿತ, ಬುವಿ, ಭಾನು, ಸಸ್ಯ, ಪ್ರಾಣಿ, ಶಿಕ್ಷಣ, ಸಂಸ್ಕೃತಿ ಮುಂತಾದ ಎಲ್ಲಾ ಜ್ಞಾನ ಕ್ಷೇತ್ರಗಳನ್ನು ತನ್ನ ಶಬ್ದ ಸಾಮರ್ಥ್ಯದಿಂದ ಶ್ರೀಮಂಗಗೊಳಿಸಿರುವುದಾಗಿದೆ. ಸಂಸ್ಕೃತ ಭಾಷೆಯ ಇತಿಹಾಸವನ್ನು ಅವಲೋಕಿಸಿದಾಗ ಅದು ವ್ಯವಹಾರ ಭಾಷೆಯಾಗಿದ್ದು ಗೃಹನ್ಮಡಿಯಾಗಿ ಅರಳಿದು ತಿಳಿದು ಬರುತ್ತದೆ. ಕ್ರಿ.ಶ. ೭೦೦ರಲ್ಲಿದ್ದ ಭಾಮಹನು ಉತ್ತಮವರ್ಗದ ಸ್ತ್ರೀಯರು ಮತ್ತು ಬಾಲಕರು ಸಹ ಸಂಸ್ಕೃತ ಭಾಷೆಯಲ್ಲಿ ಕವಿತೆಗಳನ್ನು ರಚಿಸಿರುವರೆಂದು ಹೇಳಿರುವನು. ಭೋಜರಾಜನ ಆಸ್ಥಾನದಲ್ಲಿ ಅನೇಕ ವನಿತೆಯರು ತಮ್ಮ ವಾಕ್‌ಚಾತುರ್ಯವನ್ನು ಸಂಸ್ಕೃತದಲ್ಲಿ ಪ್ರದರ್ಶಿಸಿ ಬಹುಮಾನ ಪಡೆದ ಉಲ್ಲೇಖವಿದೆ. ನಮ್ಮ ಪರಂಪರೆಯ ವಿಸ್ಮೃತಿಯಿಂದಾಗಿ ಸಂಸ್ಕೃತ ಭಾಷೆಯನ್ನು ಗ್ರಂಥಸ್ಥ ಪರಿಧಿಗೆ ಸೀಮಿತಗೊಳಿಸಿದೆಯಾಗಿ ಬೇರೇನೂ ಅಲ್ಲವೆಂದೇ ಭಾವಿಸುತ್ತೇನೆ. ಸುದೈವದಿಂದಾಗಿ ಸಂಸ್ಕೃತ ಭಾರತಿಯಂತಹ ಸಂಸ್ಥೆಗಳು ಸಂಸ್ಕೃತ ಭಾಷೆಯ ಪುನರುತ್ಥಾನಕ್ಕೆ ದೀಕ್ಷಾಬದ್ಧವಾಗಿ ಮುನ್ನಡೆದಿರುವುದು ಸಂತೋಷವನ್ನುಂಟುಮಾಡಿದೆ.

**'ಸಂಸ್ಕೃತ ಕುಸುಮೋಪವನೇ ವಿಲಸಿತ್ಕಾವ್ಯ ವೃಕ್ಷೇಭ್ಯಃ ।**
**ಅವತಂಸಯಂತು ಕೃತುನಃ ಸುವಚಃ ಪುಷ್ಪಾಣಿ ಸಂಗೃಹ್ಯ ॥**

ಸಂಸ್ಕೃತ ಭಾಷೆಯೆಂಬ ಸುಂದರವಾದ ತೋಟದಲ್ಲಿ ಪ್ರತಿಭಾಶಾಲಿಗಳಾದ ಮಹಾಕವಿಗಳು ಮಹಾಕಾವ್ಯಗಳೆಂಬ ಹೂವಿನಮರಗಳನ್ನು ನೆಟ್ಟು ಬೆಳಸಿದ್ದಾರೆ. ಅವುಗಳಲ್ಲಿ ಸೂಕ್ತಿ ಕುಸುಮಗಳಿಗೆ. ಅವುಗಳಿಂದ ಕಿವುಗಳನ್ನು ಅಲಂಕರಿಸಿಕೊಳ್ಳುವವರೇ ಧನ್ಯರು. 'ಸೂಕ್ತಿ ಸುಧಾರ್ಣವ' ಎಂಬ ಗ್ರಂಥರತ್ನವೇ ಇದೆ.

* * *

ಬಸವಣ್ಣನವರು ಸಂಸ್ಕೃತ ವಿರೋಧಿಗಳೆಂದು ಕೆಲವರು ಭಾವಿಸಿದ್ದಾರೆ. ಅದು ಸರಿಯಲ್ಲ. ಸಂಸ್ಕೃತ ಭಾಷೆಯಲ್ಲಿ ಅಪಾರ ಜ್ಞಾನಸಂಪಾದನೆ ಅವರದಾಗಿತ್ತು. ಅವರ ವಚನಗಳೇ ಅದಕ್ಕೆ ಸಾಕ್ಷಿಯಾಗಿವೆ. ವೇದಾಗಮ ಉಪನಿಷತ್ತುಗಳನ್ನು ತಲಸ್ಪರ್ಶಿಯಾಗಿ ಅರಿತವರು. ತಮ್ಮ ರಚನೆಗಳಲ್ಲಿ ಅನೇಕ ಸಂದರ್ಭಗಳಲ್ಲಿ ಅವುಗಳಿಂದ ಉದ್ಧರಣಗಳನ್ನು ಕೊಟ್ಟಿದ್ದಾರೆ. ಕನ್ನಡದ ಬಗ್ಗೆ ಬಸವಣ್ಣನವರದು ಮಾತೃಪ್ರೀತಿ, ಅಪ್ಪಟ ಪ್ರೇಮ, ಕನ್ನಡ ಭಾಷೆಗೆ ಕಸುವು ಕಟ್ಟಿದವರು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ

**ಲಲಾಟದಲ್ಲಿ ವಿಭೂತಿ, ಕೊರಳಲ್ಲಿ ರುದ್ರಾಕ್ಷ ಮಾಲೆ**
**ಮುಖದಲ್ಲಿ ಶಿವಮಂತ್ರ ಅಂಗದ ಮೇಲೆ**
**ಶಿವಲಿಂಗಧಾರಣವನುಳ್ಳ**
**ಶಿವಭಕ್ತನೆ ಸಾಕ್ಷಾತ್ ಶಿವ ತಾನೆ ನೋಡಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಲಲಾಟದಲ್ಲಿ ವಿಭೂತಿ – ಲಲಾಟದಲ್ಲಿ-ಫಣೆಯಲ್ಲಿ, ವಿಭೂತಿ-ಚಿದ್ವಿಭೂತಿಯು; ಕೊರಳಲ್ಲಿ-ಕಂಠದಲ್ಲಿ, ರುದ್ರಾಕ್ಷಮಾಲೆ-ಹರಾಕ್ಷಿ ಮಾಲೆಯು; ಮುಖದಲ್ಲಿ – ಜಿಹ್ವೆಯಲ್ಲಿಯು, ಶಿವಮಂತ್ರವಾದುದು ಶಿವಷಡಕ್ಷರಿ ಮಂತ್ರವು; ಅಂಗದ ಮೇಲೆ – ಆಚಾರಲಿಂಗದ ಮೇಲೆ, ಶಿವಲಿಂಗ-ಮಾಂಗಲ್ಯ ಸ್ವರೂಪವಾದ ಇಷ್ಟಲಿಂಗವ, ಧಾರಣವುಳ್ಳ – ಸಂಬಂಧವುಂಟಾದ, ಶಿವಭಕ್ತನೆ-ಹರಭಕ್ತನೆ, ಸಾಕ್ಷಾತ್-ಪ್ರತ್ಯಕ್ಷವಾದ, ಶಿವತಾನೆ – ಪರಶಿವಲಿಂಗವು ತಾನೆ, ನೋಡಾ-ಕಂಡಾ, ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ತನುವ ಬಳಲಿಸೆಂದೆ ಮನವಕಂದಿಸೆಂದೆ
ಧನವ ಜಂಗಮಕೆ ನೀಡೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೂವಾಗಿ ಅರಳಿರುವೆ ಸೊಡರಾಗಿ ಬೆಳಗಿರುವೆ
ಪುಣ್ಯನದಿಯಾಗಿ ಹರಿದಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಗ್ಗೆಯ ಮಾಯಿದೇವ ಮೈಲಾರ ಶರಣರ
ಹಿಗ್ಗಿನಿಂದಲಿ ನಿರುತ ಸ್ಮರಿಸುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೂರುಸಾವಿರಮಠದ ಗುರುಸಿದ್ಧತಂದೆಗಳ
ಸಿದ್ಧಾರೂಢಮಠದಯತಿಗಳ । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆದ್ಯರ ಪ್ರಮಥರ ಅನುಭಾವಿ ಪುಣ್ಯರ
ಲೋಕಕಾರುಣ್ಯರ ಶರಣರ । ಸ್ಮರಿಸುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರನಿಷ್ಠರ ಸುವಿಚಾರಶೀಲರ
ಕಾಯಕಯೋಗಿಗಳ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀಲಮ್ಮ ಲಕ್ಕಮ್ಮ ಕದಿರೆಯ ರೆಮ್ಮವ್ವೆ
ವರದಾನಿ ಗುಡ್ಡವ್ವೆಯ ಸ್ಮರಿಸುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರನ ಚರಣಕ್ಕಿಂತ ಗುರುಚರಣವೆ ಮೇಲು
ವರಜಂಗಮದ ಚರಣ ಬಹುಮೇಲು । ತಿಳಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದೇವನ ಕಂಡು ಕಂಗಳು ತುಂಬಿದವು
ಜಂಗಮವ ಕಂಡು ಮನತುಂಬಿ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಭಾವಿಗಳ ಸಂಗ ಹಾಲು ಜೇನುಂಡಂತೆ
ಮನದೊಳಗೆ ಮಲ್ಲಿಗೆ ಬಿರಿದಂತೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**



ಸ್ಮರಣೆ

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಒಂದು ಜೀವಂತ ತತ್ತ್ವಜ್ಞಾನ

– ಡಾ. ಶ್ರೀ ಶಿವಾನಂದ ಶಿವಾಚಾರ್ಯರು *

ಸಿದ್ಧಗಂಗೆ ಎಂದರೆ ಅಂತಃಕರಣ! ಅಂತಃಕರಣವೆಂದರೆ ಸಿದ್ಧಗಂಗೆ! ಅಂತಃಕರಣವೇ ಸಿದ್ಧಗಂಗೆಯ ಅಂತರಂಗ. ಇದು ಧರ್ಮಕ್ಷೇತ್ರವೂ ಹೌದು. ಅನ್ನಕ್ಷೇತ್ರವೂ ಹೌದು ಮತ್ತು ಪುಣ್ಯಕ್ಷೇತ್ರವೂ ಹೌದು. ಇಲ್ಲಿ ಹಸಿದ ಹೊಟ್ಟೆಗಳು ಉಂಡು ತಣಿಯುತ್ತವೆ, ನೊಂದ ಮನಸ್ಸುಗಳು ನಲಿದು ಹಾಡುತ್ತವೆ. **'ಅಯ್ಯಾ'** ಎಂದು ಬಂದವರಿಗೆ ಇಲ್ಲಿ ಆಶ್ರಯವಿದೆ. 'ಅಯ್ಯೋ' ಎಂದು ಬಂದವರಿಗೆ ಸಾಂತ್ವನವಿದೆ. ಜೀವನದ ಸಂಘರ್ಷದಲ್ಲಿ ನೊಂದು ಬೆಂದವರಿಗೆ ಮತ್ತು ಸೋತು ನಿಂದವರಿಗೆ ಸಿದ್ಧಗಂಗೆ ಮರುಹುಟ್ಟು ಕೊಡುತ್ತದೆ. ನೊಂದವರ ನೋವಿಗೆ ಇಲ್ಲಿ ಸಾಂತ್ವನವಿದೆ, ಬಳಲಿದವರ ಬಾಳಿಗಿಲ್ಲಿ ಆಶ್ರಯವಿದೆ. ನಿರಾಶ್ರಿತರು ಇಲ್ಲಿ ಬಂದು ನಿಶ್ಚಿಂತರಾಗುತ್ತಾರೆ. ಬಳಲಿದವರು ಇಲ್ಲಿ ಬಂದು ಬವಣೆ ನೀಗುತ್ತಾರೆ. ಬಡ ಮಕ್ಕಳಿಗಂತೂ ಇದು ಮಾತಾ ಅನ್ನಪೂರ್ಣೇಶ್ವರಿಯ ಮಡಿಲು ಮತ್ತು ವಿದ್ಯಾಧಿದೇವತೆ ಶಾರದೆಯ ತೊಟ್ಟಿಲಿದ್ದ ಹಾಗೆ ! ಆದ್ದರಿಂದಲೇ ಸಹಸ್ರ ಸಹಸ್ರ ಮಕ್ಕಳು ಈ ಪವಿತ್ರ ಪರಿಸರದಲ್ಲಿ ಹಾಯಾಗಿ ಉಂಡಾಡಿಕೊಂಡು ಅಧ್ಯಯನನಿರತರಾಗಿದ್ದಾರೆ. ನಾವಂತೂ ಸಿದ್ಧಗಂಗೆಯನ್ನು ಅಭಿಮಾನದಿಂದ **'ಛಾತ್ರ ಕಾಶಿ'** (ವಿದ್ಯಾರ್ಥಿ ಕಾಶಿ) ಎಂದು ಕರೆಯುತ್ತಿರುತ್ತೇವೆ. 'ಸಸ್ಯಭೂಯಿಷ್ಠ'ವಾದುದು 'ಸಸ್ಯಕಾಶಿ' ಯಾಗಿರುವುದಾದರೆ 'ವಿದ್ಯಾರ್ಥಿಭೂಯಿಷ್ಠ'ವಾಗಿರುವುದು 'ಛಾತ್ರಕಾಶಿ' (ವಿದ್ಯಾರ್ಥಿ ಕಾಶಿ) ಏಕಾಗಬಾರದು? ಎಂಬುವುದು ನಮ್ಮ ಭಾವನೆ. ಕಾಡಿನಲ್ಲಿ ಹಕ್ಕಿಗಳ 'ಚಿಲಿಪಿಲಿ' ತುಂಬಿಕೊಂಡಿರುವ ಹಾಗೆ ಇಲ್ಲಿ ಮಕ್ಕಳ 'ಕಲರವ'ವು ತುಂಬಿಕೊಂಡಿರುತ್ತದೆ. ಪರಮಪೂಜ್ಯರ ಆಶ್ರಯದಲ್ಲಿರುವ ಮಕ್ಕಳು ತಾಯಿಯ ಮಡಿಲಲ್ಲಿದ್ದಷ್ಟೇ ಖುಶಿ ಖುಶಿಯಾಗಿರುತ್ತವೆ. ಮಕ್ಕಳ 'ಕಲರವ'ವಿಲ್ಲದ ಸಿದ್ಧಗಂಗೆಯನ್ನು ಊಹಿಸಿಕೊಳ್ಳುವುದು ಕಷ್ಟ, ಕರಕಷ್ಟವೆಂದು ಹೇಳಿದರೆ ಅದೇನೂ ಅತಿಶಯೋಕ್ತಿಯಲ್ಲ.

ಅನ್ನ ದಾಸೋಹ, ಜ್ಞಾನ ದಾಸೋಹ ಮತ್ತು ಕಾಯಕ ದಾಸೋಹ ಈ 'ತ್ರಿವಿಧ ದಾಸೋಹ'ಗಳ ತವರುಮನೆ ಸಿದ್ಧಗಂಗೆ. ಸಿದ್ಧಗಂಗೆಯು ದಾಸೋಹ ಪದದ **'ಪರ್ಯಾಯ ಪದ'**ವಾಗಿ ಬೆಳೆದು ನಿಂತಿದೆ. ದಾಸೋಹವೇ ಈ ಕ್ಷೇತ್ರದ ಉಸಿರು. ದಾಸೋಹವೇ ಈ ಕ್ಷೇತ್ರದ ಪ್ರಾಣ. ದಾಸೋಹ ಪದಕ್ಕೆ ಹೊಸ ವ್ಯಾಖ್ಯೆಯನ್ನು ಬರೆದ ಕೀರ್ತಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಸಂದಾಯವಾಗುತ್ತದೆ. ದಾನ ಮತ್ತು ದಾಸೋಹ ಇವೆರಡೂ **'ಸಮಾನ ಮನಸ್ಕ'**ಗಳಾಗಿದ್ದು **'ಸಮಾನ ವೇದಿಕೆ'**ಯ ಮೇಲೆ ನಿಂತುಕೊಂಡಿದ್ದರೂ ಸಹ ಇವೆರಡರಲ್ಲಿ ಅಜಗಜಾಂತರವಿದೆ. ಆರ್ಯರ **'ದಾನ ಪರಿಕಲ್ಪನೆ'**ಗಿಂತಲೂ ವೀರಶೈವರ **'ದಾಸೋಹ ಪರಿಕಲ್ಪನೆ'**ಯು ಶ್ರೇಷ್ಠ, ಶ್ರೇಷ್ಠತರವಾದುದು. ಅದೇನು ಕಾರಣವೆಂದೊಡೆ, "ದಾನದಲ್ಲಿ ಕೊಡುವ 'ಕೈ' ಮೇಲಿರುತ್ತದೆ. ಪಡೆದುಕೊಳ್ಳುವ 'ಕೈ' ಕೆಳಗಿರುತ್ತದೆ. ದಾನದಲ್ಲಿ ದಾನ ಕೊಟ್ಟವನು 'ಧನ್ಯತಾ ಭಾವ'ದಿಂದ ಪುಳಕಿತನಾಗುತ್ತಿದ್ದರೆ ದಾನ ತೆಗೆದುಕೊಂಡವನು 'ದೈನ್ಯ (ದೀನತಾ) ಭಾವ'ದಲ್ಲಿ ಮುಳುಗಿಕೊಂಡಿರುತ್ತಾನೆ. ದಾನದಲ್ಲಿ ಸೂಕ್ಷ್ಮವಾಗಿ ಅಹಂಕಾರವು ಸಂಚರಿಸಿಕೊಂಡಿರುತ್ತದೆ. ದಾಸೋಹದಲ್ಲಿ ನಿರ್ವಿಕಾರವು ಸ್ಥಾಯಿಯಾಗಿ ನಿಂತುಕೊಂಡಿರುತ್ತದೆ. ದಾಸೋಹದಲ್ಲಿ ಯಾರೊಬ್ಬರ ಕೈ ಮೇಲಿಲ್ಲ. ಯಾರೊಬ್ಬರ ಕೈ ಕೆಳಗಿಲ್ಲ. ದಾಸೋಹದಲ್ಲಿ ಯಾರೊಬ್ಬರೂ ಮೇಲರಿಮೆಯ ಭಾವನೆಯಿಂದ ಹಿಗ್ಗಿಕೊಳ್ಳುವುದಕ್ಕಾಗಲಿ ಅಥವಾ ಕೀಳರಿಮೆಯ ಭಾವನೆಯಿಂದ ಕುಗ್ಗಿಕೊಳ್ಳುವುದಕ್ಕಾಗಲಿ ಅವಕಾಶವಿರುವುದಿಲ್ಲ. ದಾನವಿದು 'ಸಾರ್ವಭೌಮವಾದ'ದ ಪ್ರತೀಕವಾದರೆ ದಾಸೋಹವಿದು 'ಸಮಾಜವಾದ'ದ ಪ್ರತೀಕ. ಆರ್ಷವಾಣಿಯಂತೆ ಎಲ್ಲರೂ "ಸಹನಾವವತು, ಸಹ ನೌ ಭುನಕ್ತು' ಎಂದು ಹಂಚಿಕೊಂಡು ಊಟ ಮಾಡುವುದು ದಾಸೋಹ. ಕೈ ಎತ್ತಿ ಕೊಡುವುದು ದಾನ ! ತುತ್ತು ಮಾಡಿ ಉಣಿಸುವುದು ದಾಸೋಹ ! ವೀರಶೈವ ಸಿದ್ಧಾಂತವಿದು 'ಸಹಜೀವನ' ಮತ್ತು 'ಸಹಭೋಜನ' 'ತತ್ವಪ್ರಣಾಳಿ'ಯನ್ನು ಪುಷ್ಟೀಕರಿಸುತ್ತದೆ. 'ದಾಸೋಹ' ಎಂಬೀ ಪದವನ್ನು ವೀರಶೈವ 'ನಿಘಂಟಿ' (ಪಾರಿಭಾಷಿಕ ಕೋಶ)ನಲ್ಲಿ ಕಾಣುವುದಾದರೆ ಅದರ 'ಅರ್ಥ'ವನ್ನು ಸಿದ್ಧಗಂಗಾ ಕ್ಷೇತ್ರದಲ್ಲಿ ಕಾಣಬಹುದು. ಈ ಕ್ಷೇತ್ರದಲ್ಲಿ ಅನ್ನದೇವತೆ ಮಾತಾ

* ಹಿರೇಮಠ, ತುಮಕೂರು.

ಅನ್ನಪೂರ್ಣೇಶ್ವರಿಯು ಪ್ರತ್ಯಕ್ಷವಾಗಿ ವಾಸ್ತವ್ಯ ಹೂಡಿಕೊಂಡಿದ್ದಾಳೆ. ಸಿದ್ಧಗಂಗಾ ಇದು ಅನ್ನಕ್ಷೇತ್ರ ! ಪರಮಪೂಜ್ಯರು ಅನ್ನಧನರು! 'ಅನ್ನಧನದ ಮುಂದೆ ಇನ್ನು ಧನಗುಳುಂಟೇ?' ಬರೀ ಈ ಕ್ಷೇತ್ರದಲ್ಲಿ ಅನ್ನಧನವಷ್ಟೇ ತುಂಬಿಕೊಂಡಿಲ್ಲ. ಇಲ್ಲಿ ಸತತವೂ ಸಾಂತ್ವನ, ಸಹಾನುಭೂತಿ ಮತ್ತು ಅನುಕಂಪದ ಅಲೆಗಳು ಪ್ರವಹಿಸಿಕೊಂಡಿವೆ.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೊಂದು ಜೀವಂತ ತತ್ವಜ್ಞಾನ ! ಪೂಜ್ಯರು ದಂತಕಥೆಯಾಗಿ ಬೆಳೆದುನಿಂತಿದ್ದಾರೆ. ಅವರಲ್ಲಿ ಅನ್ನದೇವ ಮತ್ತು ಜ್ಞಾನದೇವ ಈರ್ವರೂ ಮಿಳಿತಗೊಂಡಿದ್ದಾರೆ. ಅವರನ್ನು 'ಜೀವಂತ ಅನ್ನಪೂರ್ಣೆ' ಎಂದು ಹೇಳಬಹುದು. ದಾಸೋಹ ಪರಿಕಲ್ಪನೆಗೆ ಹೊಸ ಆಯಾಮವನ್ನು ಒದಗಿಸಿಕೊಟ್ಟು ಅದನ್ನು ಅಕ್ಷರಶಃ ಚಲಾವಣೆಗೆ ತಂದ ಸಾಧನೆ ಮತ್ತು ಸಾಹಸ ಪರಮಪೂಜ್ಯರ 'ಕೀರ್ತಿ ಬತ್ತಳಿಕೆ'ಯನ್ನು ಸೇರಿಕೊಳ್ಳುತ್ತದೆ. ದಾಸೋಹವೇ ಪರಮಪೂಜ್ಯರ ಪೂಜೆ ಮತ್ತು ದಾಸೋಹವೇ ಪರಮಪೂಜ್ಯರ ಪ್ರಾರ್ಥನೆ. 'ಕೂಡಲಸಂಗಮದೇವ ತನಗೆ ಒಲಿವನೋ ಅಥವಾ ಒಲಿಯನೋ?' ಎಂಬ ಚಿಂತೆ ಯಾವ ರೀತಿ ಅಣ್ಣ ಬಸವಣ್ಣನಿಗೆ ಬಾಧಿಸುತ್ತಿತ್ತೋ ಅದೇ ರೀತಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ 'ಮಠದಲ್ಲಿನ ಮಕ್ಕಳು ಉಂಡರೋ ಇಲ್ಲವೋ' ಎಂಬ ಚಿಂತೆ ಬಾಧಿಸುತ್ತಿತ್ತು. ಮಕ್ಕಳಿಗೆ ಪ್ರಸಾದ ನೀಡುವಲ್ಲಿ ಸ್ವಲ್ಪ ವಿಳಂಬವಾದರೂ ಕೂಡ ಪೂಜ್ಯರು ಅದನ್ನು ಸಹಿಸಿಕೊಳ್ಳುತ್ತಿರಲಿಲ್ಲ. ಅದೆಂಥ ಗಣ್ಯಾತಿಗಣ್ಯ, ಮುಖ್ಯಾತಿಮುಖ್ಯ ಪ್ರತಿಷ್ಠಿತರುಗಳು ಅವರನ್ನು ಆವರಿಸಿಕೊಂಡಿದ್ದರೂ ಸಹ ಅವರು ಆ ಕೂಡಲೇ ದಾಸೋಹದ ಮನೆಗೆ ನಡೆದು ಬಿಡುತ್ತಿದ್ದರು. ತಕ್ಷಣ ವ್ಯವಸ್ಥೆಯನ್ನು ಸರಿಪಡಿಸಿ ಮಕ್ಕಳು ಉಂಡು ತೇಗಿಯಾದ ಮೇಲೆಯೆ ಅವರು ಪ್ರತಿಷ್ಠಿತರುಗಳತ್ತ ಮುಖ ಮಾಡುತ್ತಿದ್ದರು! ಇಂಥ 'ಮಾತೃವಾತ್ಸಲ್ಯ' ಆ ಮಕ್ಕಳನ್ನು ಹೆತ್ತ ತಾಯಂದಿರಲ್ಲಿಯಾದರೂ ಇರುತ್ತದೆಯೋ ಇಲ್ಲವೋ ಎಂಬ ಸಂದೇಹ ಆಗಾಗ್ಗೆ ನಮ್ಮನ್ನು ಕಾಡುತ್ತಲೇ ಇರುತ್ತದೆ.

'ಅಣ್ಣ ಬಸವಣ್ಣ ಕಲ್ಯಾಣದಲ್ಲಿ ಪ್ರತಿದಿನವೂ ಒಂದು ಲಕ್ಷದ ತೊಂಬತ್ತಾರು ಸಾವಿರ ಜನಗಳಿಗೆ ಊಟ ಮಾಡಿಸುತ್ತಿದ್ದ' ಎಂಬ ವಿಷಯವನ್ನು ನಂಬಿದ್ದರೆ ನಂಬಬಹುದು ಇಲ್ಲವೆ ನಂಬದಿರಬಹುದು. ಅದು ನಮ್ಮ ಶ್ರದ್ಧೆ ಹಾಗೂ ನಂಬಿಕೆಗೆ ಬಿಟ್ಟ ವಿಷಯ. ಅಷ್ಟೊಂದು ಜನಗಳಿಗೆ ದಿನನಿತ್ಯದಲ್ಲಿ ಊಟವಾಡಿಸುವುದು ಸಾಮಾನ್ಯದ ವಿಷಯವೇನಲ್ಲ. ಹಾಗೆ ಮಾಡಿಸುವುದು ಅದೆಂಥ ಅಸಾಧ್ಯದ ಕೆಲಸವೆಂಬುದು ಎಲ್ಲರಿಗೂ ಗೊತ್ತಿದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ವಿಷಯವಿದೆ. ಅಂದು ಕಲ್ಯಾಣದಲ್ಲಿ ವಾಸಮಾಡಿಕೊಂಡಿದ್ದ ಬಹುಪಾಲು ಜನಗಳು 'ಲಿಂಗದೀಕ್ಷೆ'ಯನ್ನು ಮತ್ತು 'ಕಾಯಕದೀಕ್ಷೆ'ಯನ್ನು ಪಡೆದುಕೊಂಡವರು. ಸಾಮಾನ್ಯವಾಗಿ ಅವರೆಲ್ಲ ಶರಣರು. ಶರಣರಾರೂ ಬಸವಣ್ಣನವರ ಉಚಿತ ದಾಸೋಹದಲ್ಲಿ ಬಂದು ಊಟ ಮಾಡುತ್ತಿರಲಿಲ್ಲ. ಅವರು ಕಾಯಕವನ್ನು ಮಾಡಿಕೊಂಡಿದ್ದು ತಮ್ಮ ಸ್ವಯಾರ್ಜಿತದಿಂದ ಬಂದದ್ದನ್ನು ಖರ್ಚಿಸಿ ಪ್ರಸಾದವನ್ನು ಸ್ವೀಕರಿಸುತ್ತಿದ್ದರು. ಅವರು ಅದೇನಿದ್ದರೂ ಸಹ ಕಷ್ಟಪಟ್ಟು ದುಡಿದು ತಮ್ಮ ದುಡಿಮೆಯಿಂದ ಬಂದ ದುಡ್ಡನ್ನು ವ್ಯಯಿಸಿ ಊಟ ಮಾಡುವ 'ಶಿಷ್ಟ ಅಭ್ಯಾಸ'ವನ್ನು ರೂಢಿಸಿಕೊಂಡಿದ್ದರು. ಅದುವೇ ಅವರ ತತ್ವವಾಗಿತ್ತು, ಮತ್ತದುವೇ ಅವರ ಸಿದ್ಧಾಂತವಾಗಿತ್ತು. 'ನಾಳೆಗಿರಲಿ' ಎಂದು ಒಂದಿಷ್ಟು ಅಕ್ಕಿಯನ್ನು ಹೆಚ್ಚಿಗೆ ಆಯ್ದುಕೊಂಡು ಬಂದರೆ 'ಈಸಕ್ಕಿಯ ಆಸೆ ನಿಮಗೇಕೆ? ಆಸೆ ಎಂಬುದು ಅರಸಿಂಗಲ್ಲದೆ ಶಿವಶರಣರಿಗುಂಟೇ ಅಯ್ಯಾ' ಎಂದು ಪತಿಯನ್ನೇ ತರಾಟೆಗೆ ತೆಗೆದುಕೊಂಡ ಪುಣ್ಯಸ್ತ್ರೀಯರಿರುವ ಆ ಕಾಲದಲ್ಲಿ ಎಲ್ಲಿಯಾದರೂ ಉಂಡು ಹೊಟ್ಟೆ ತುಂಬಿಸಿಕೊಂಡು ಲೋಕಾಭಿರಾಮವಾಗಿ ಮಾತನಾಡುತ್ತ ದೇಶಾವರಿ ತಿರುಗುವ ಅಭ್ಯಾಸವನ್ನು ಶರಣರು ರೂಢಿಸಿಕೊಂಡಿದ್ದರು ಎಂಬುವುದನ್ನು ಕಲ್ಪಿಸಿಕೊಳ್ಳಲೂ ಕೂಡ ಸಾಧ್ಯವಿಲ್ಲ. ಆ ರೀತಿ ಊಹಿಸಿಕೊಳ್ಳುವುದು ಕೂಡ ಕಷ್ಟ. ಇಂಥ ಪರಿಸ್ಥಿತಿಯಲ್ಲಿ ಬಸವಣ್ಣ ದಿನನಿತ್ಯದಲ್ಲಿ 'ಅದಷ್ಟೊಂದು ಜನಗಳನ್ನು ಊಟಕ್ಕಾಗಿ ಅದೆಲ್ಲಿಂದ ಕರೆದುತರುತ್ತಿದ್ದ?" ಎಂಬ ಪ್ರಶ್ನೆಯನ್ನು ಗಂಭೀರವಾಗಿ ಚಿಂತಿಸಬೇಕಾಗುತ್ತದೆ. ಆದ್ದರಿಂದಲೇ ನಾವದನ್ನು ನಂಬಿಕೆಗೆ ಬಿಟ್ಟ ವಿಷಯವೆಂದು ಹೇಳಿರುವುದು. ಆದರೆ ಸಿದ್ಧಗಂಗೆಯಲ್ಲಿ ನಿತ್ಯದಲ್ಲೂ ಹತ್ತು ಸಹಸ್ರ ಮಕ್ಕಳು ಮತ್ತು ಸಾವಿರ ಸಾವಿರ ಜನಗಳು ಊಟ ಮಾಡುತ್ತಾರೆ ಎಂದರೆ ನಾವದನ್ನು ನಂಬಲೇ ಬೇಕಾಗುತ್ತದೆ. ಏಕೆಂದರೆ ಇದು ನಂಬಿಕೆಗೆ ಬಿಟ್ಟ ವಿಷಯವಲ್ಲ. ಇದು ದಿನನಿತ್ಯದಲ್ಲೂ ನಮ್ಮ 'ಕಣ್ಣೆದುರಿಗಿನ ತಳಮಳ'ಕ್ಕೆ ಸಿದ್ಧಗಂಗೆ ನೀಡುತ್ತಿರುವ ಪವಾಡಸದೃಶ ಚಿಕಿತ್ಸೆ ! ಇಲ್ಲಿನದು ಕಣ್ಣಿಗೆ



ರಾಚುವ ವಸ್ತುನಿಷ್ಠ ವಾಸ್ತವ ! ಇದು ಊಹೆಯಲ್ಲ ! ಇದು ಪಾರದರ್ಶಕ ಸತ್ಯ. 'ದಾನಾದೇವ ತು ಕೈವಲ್ಯಮ್' ಎಂದು 'ಋಷಿ -ವಚನ'ಗಳು ಅಪ್ಪಣೆಕೊಡಿಸಿದರೆ ಪರಮಪೂಜ್ಯರು 'ದಾಸೋಹ ಏವ ತು ಜೀವನಮ್' ಎಂಬ ಮಾತಿಗೆ ಪ್ರಾಯೋಗಿಕ ಟಿಪ್ಪಣಿ ಬರೆದಿದ್ದಾರೆ. ಯಾವ ರೀತಿ ಮಹಾತ್ಮ ಗಾಂಧೀಜಿಯವರಿಗೆ 'ಸತ್ಯವೇ ಜೀವನ' ಮತ್ತು 'ಜೀವನವೆಂದರೆ ಸತ್ಯ'ವಾಗಿತ್ತೋ ಅದೇ ರೀತಿ ಪರಮಪೂಜ್ಯರಿಗೆ 'ದಾಸೋಹವೇ ಜೀವನ' ಮತ್ತು 'ಜೀವನವೇ ದಾಸೋಹ'ವಾಗಿತ್ತು.

ಜಾನ್ ಹಾಲ್ ಹೇಳುವ ಮಾತನ್ನು ಇಲ್ಲಿ ಗಮನಿಸಬೇಕು, "Give according to you means or God will make your means according to your giving" ನೀನು ಕೈಲ್ಲಿರುವುದನ್ನು 'ಕೈ' ಬಿಚ್ಚಿ ಕೊಡುವುದನ್ನು ಕಲಿತುಕೋ. ಆಗ ಆ ದೇವರು ನಿನಗೆ 'ಕೈ' ತುಂಬ ಕೊಡುವುದನ್ನು ರೂಢಿಸಿಕೊಳ್ಳುತ್ತಾನೆ. 'ಸಿದ್ಧಗಂಗಾ ಕ್ಷೇತ್ರದ ದಾಸೋಹದ ವ್ಯವಸ್ಥೆಯನ್ನು ನೋಡಿದಾಗ ಈ ಮಾತು ಅಕ್ಷರಶಃ ಸತ್ಯವೆಂಬುವುದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ. ಪೂಜ್ಯರ 'ಸಂಕಲ್ಪ ಶಕ್ತಿ' ತುಂಬ ದೊಡ್ಡದು. ಸಾವಿರಾರು ಮಕ್ಕಳಿಗೆ ಊಟ ಮಾಡಿಸಬೇಕು, ವಿದ್ಯಾ ಪ್ರದಾನ ಮಾಡಬೇಕೆಂಬ ಅವರ ಆ ಘನ 'ಮಹಾಸಂಕಲ್ಪ'ಕ್ಕೆ ಆ ದೇವನೇ 'ಸಹಕಾರಿ'ಯಾಗಿ ಮತ್ತು 'ಸಹಾಯಕ'ನಾಗಿ ನಿಂತುಕೊಂಡಿದ್ದಾನೆ ಎಂದೆನಿಸದೆ ಇರಲಾರದು.

ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ 'ಸುನಾಮಿ'ಯಂತೆ ನಾಡಿನುದ್ದಗಲಗಳಿಂದ ಹರಿದು ಬರುವ ಆ ಮಕ್ಕಳಿಗೆಲ್ಲ ಪೂಜ್ಯರು ಅದೇಹೇಗೆ ಊಟ, ವಸತಿಗಳ ವ್ಯವಸ್ಥೆ ಮಾಡುತ್ತಾರೋ ಆ ದೇವರೇ ಬಲ್ಲ ! ಬಡತನದ ಬೇಗೆಯಲ್ಲಿ ನೊಂದು ಬೆಂದು ಬಂದ ಮಕ್ಕಳಿಗೆ, ಅವರ 'ಮಾತಾಪಿತೃ'ಗಳಿಗೆ 'ಸ್ಥಳವಿಲ್ಲ, ಅವಕಾಶವಿಲ್ಲ'ವೆಂದು ಹೇಳದೆ ಯಾರನ್ನೂ ನಿರಾಶೆಗೆ ಒಳಗುಪಡಿಸದೆ ಎಲ್ಲರನ್ನೂ ಸಂತೈಸುವ ಮತ್ತು ಸಮಾಧಾನಿಸುತ್ತಿದ್ದ ಈ 'ವಿಶ್ವಬಂಧು'ವನ್ನು ಮತ್ತು 'ವಸುಧೈವ ಕುಟುಂಬಿ'ಯನ್ನು ಕಂಡು ನಮಗಂತೂ ಆಶ್ಚರ್ಯವಾಗುತ್ತದೆ. ಪರಮಪೂಜ್ಯರು ಎಲ್ಲರನ್ನೂ ವಹಿಸಿಕೊಳ್ಳುತ್ತಿದ್ದರು ಮತ್ತು ಎಲ್ಲವನ್ನೂ ಸಹಿಸಿಕೊಳ್ಳುತ್ತಿದ್ದರು. ಅದು ಅವರ ಸ್ವಭಾವ ! ಬಸವಣ್ಣನವರು 'ಕೂಡಲ ಸಂಗಮದೇವ'ನನ್ನು ಕುರಿತು 'ನೀನೊಲಿದರೆ ಕೊರಡು ಕೊನರುವುದಯ್ಯ, ನೀನೊಲಿದರೆ ಬರಡು ಹಯನಹುದಯ್ಯ' ಎಂದು ಹೇಳಿದ ಹಾಗೆ ಪೂಜ್ಯ ಶ್ರೀ ಸಿದ್ಧಗಂಗೆ ಶ್ರೀಗಳು ಒಲಿದು ಹರಸಿದರೆ ಮತ್ತು ಹಾರೈಸಿದರೆ ಕೊರಡಿನಂತಿರುವ ಬಡಮಕ್ಕಳ ಬಾಳು ಕೊನರುವುದು ಮತ್ತು ಬರಡಿನಂತಿರುವ ಅವರ ಬದುಕಿನಲ್ಲಿ ಸಮೃದ್ಧಿಯ ಸಂಭ್ರಮ ಮತ್ತು ಹಯನು ತುಂಬಿಕೊಳ್ಳುವುದು. ಇದರಲ್ಲಿ ಸಂದೇಹವೇ ಇಲ್ಲ. ಅವರೊಲಿದು ಪದವಿಟ್ಟ ಅವರೊಲುಮೆಯ ಕಾರಣಿಕ ಸ್ಥಳ 'ಸಿದ್ಧಗಂಗೆ' ದೀನ, ದಲಿತ, ಆರ್ತ, ಅರ್ಥಾರ್ಥಿಗಳಿಗಂತೂ ಸಾಕ್ಷಾತ್ 'ಕಾಮಧೇನು' ಮತ್ತು 'ಕಲ್ಪವೃಕ್ಷ'ವಿದ್ದ ಹಾಗೆ.

ಪರಮಪೂಜ್ಯರಲ್ಲಿ ಅದ್ಭುತವಾದ 'ಇಚ್ಛಾಶಕ್ತಿ' ಇತ್ತು. ಅವರು ತಾವು ಸ್ವಂತಕ್ಕೆ ಬೇವಿನ ರಸವನ್ನು ಕುಡಿದರೂ ಸಹ ಲೋಕಕಲ್ಯಾಣಕ್ಕಾಗಿ ನಿರಂತರವೂ ಜೇನಿನ ರಸವನ್ನು ಸ್ರವಿಸುತ್ತಿದ್ದರು. ಪರಮಪೂಜ್ಯರದು ಅಚ್ಚುಕಟ್ಟಾದ ಜೀವನಶೈಲಿಯಾಗಿತ್ತು. ಯಾವುದೇ ತೆರನಾದ ಆಮಿಷಕ್ಕೂ ಅವರ ಜೀವನಶೈಲಿ ಬಲಿಯಾಗಲಿಲ್ಲ. ಗಾಳಿ, ಮಳೆ, ಚಳಿಗಳೆ ಬರಲಿ, ಮೈಯಲ್ಲಿ ಜ್ವರ, ನೆಗಡಿ, ಕೆಮ್ಮುಗಳೇ ಇರಲಿ, ಅವರ 'ಜೀವನ ಪೂಜಾ ಮಹಾವ್ರತ' ಒಂದಿನಿತೂ ಕೂಡ ಬದಲಾಗುತ್ತಿರಲಿಲ್ಲ. ಕಾಯಿಲೆ, ಕಸಾಲೆಗಳಿಗೆ ಅವರ ಬಳಿ ಬರುವುದಕ್ಕೇ ಹೆದರುತ್ತಿದ್ದವು ! ಏಕೆಂದರೆ ಅವುಗಳಿಗೆ ಅವರ ಬಳಿ 'ಸುಗ್ರಾಸ ರಾಜ ಆತಿಥ್ಯ' ದೊರೆಯುತ್ತಿರಲಿಲ್ಲ. ಹೇಳುವವರು ಕೇಳುವವರು ಯಾರೂ ಇಲ್ಲವಾಗಿ ಅವು ಬಂದ ದಾರಿಗೆ ಸುಂಕವಿಲ್ಲದಂತೆ ತಮ್ಮ ಪಾಡಿಗೆ ತಾವು ಜರುಗಿಕೊಂಡು ಹೋಗಬೇಕಷ್ಟೇ !!

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ಜನಗಳು ಭಕ್ತಿಪರವಶತೆಯಿಂದ **'ನಡೆದಾಡುವ ದೇವರು', 'ಮಾತನಾಡುವ ದೈವ', 'ಅಭಿನವ ಬಸವಣ್ಣ'** ಎಂದಿತ್ಯಾದಿಯಾಗಿ ಕರೆದು ಸಂತೋಷ ಪಡುತ್ತಾರೆ. ಆದರೆ ಪರಮಪೂಜ್ಯರು ಆ ಎಲ್ಲ ಮಾತುಗಳಿಗೆ ಕಿವಿಯಾಗಿ ನಿಂತುಕೊಳ್ಳದೆ ತಮ್ಮನ್ನು ತಾವು 'ಕಾಯದ ತಪಸ್ವಿ'ಗಳೆಂದು ಗುರುತಿಸಿಕೊಂಡು ಆ ದಿಶೆಯಲ್ಲಿ ಕಾಯಕನಿರತರಾಗಿದ್ದರು. ಇಳಿವಯಸ್ಸಿನಲ್ಲೂ ಅವರಲ್ಲಿ ಅದೆಂಥ ಪೂಜಾನಿಷ್ಠೆಯಿತ್ತು. ಬೆಳಗಿನ ಎರಡು ಗಂಟೆಗೆ ಅವರ ಪೂಜೆ ಪ್ರಾರಂಭವಾಗುತ್ತಿತ್ತು. ಸಾಮಾನ್ಯವಾಗಿ ಎಲ್ಲರನ್ನೂ ಗಡಿಯಾರ ಎಚ್ಚರಿಸಿದರೆ ಸಿದ್ಧಗಂಗೆಯಲ್ಲಿ ಪೂಜ್ಯರು ಗಡಿಯಾರವನ್ನೇ ಎಚ್ಚರಿಸುತ್ತಿದ್ದರು. ಪರಮಪೂಜ್ಯರ 'ಸಮಯನಿಷ್ಠೆ'ಯನ್ನು ಮತ್ತು

'ಸಂಯಮನಿಷ್ಠೆ'ಯನ್ನು ಪ್ರತಿಯೊಬ್ಬರೂ ಕಲಿತುಕೊಳ್ಳಬೇಕು. ಪರಮಪೂಜ್ಯರೊಂದು ಸೊರಗದ ಸವೆಯದ ನಿರಂತರ ಚೈತನ್ಯದ ಚಿಲುಮೆ!

ಕರ್ನಾಟಕದ ಸಾವಿರಾರು ಮಠಗಳಲ್ಲಿ ಸಿದ್ಧಗಂಗೆ ಮಠಕ್ಕೆ ಶಿರೋಧಾರ್ಯ ಸ್ಥಾನವಿದೆ. ಪರಮಪೂಜ್ಯರ ಸಾಧನೆ ನಾಡಿನ ಮನೆಮಾತಾಗಿದೆ. ಪೂಜ್ಯರು 'ಸಾವಿಲ್ಲದ ಸಾಧನೆಯ ಹರಿಕಾರ'ರಾಗಿದ್ದುದರಿಂದ ಅವರು ಬದುಕಿರುವಾಗಲೇ ಪುರಾಣ, ಪುಣ್ಯಕಥೆಯಾಗಿ ಬೆಳೆದು ಬಿಟ್ಟಿದ್ದರು. ಅವರ ಸಮಗ್ರ ವ್ಯಕ್ತಿತ್ವವನ್ನು 'ಶಬ್ದತೋರಣ'ಗಳಿಂದ ಶೃಂಗರಿಸಿಡುವುದು ಕಷ್ಟಸಾಧ್ಯ. ಅವರದು ಶಬ್ದಗಳಾಚೆ ಬೆಳೆದ ವ್ಯಕ್ತಿತ್ವ, ಅವರು ಶಬ್ದಾತೀತರು ಮತ್ತು ಸೀಮಾತೀತರು! ನಿಯಮ-ನಿಷ್ಠೆಗಳನ್ನು, ಅಷ್ಟಾವರಣ ಪ್ರೇಮವನ್ನು, ಅನುಭವ ಮತ್ತು ಅನುಭಾವಗಳನ್ನು ಅವರನ್ನು ನೋಡಿ ಕಲಿಯಬೇಕಾಗಿತ್ತು. ಶುಷ್ಕ ವೈಚಾರಿಕತೆಯ ಕುಷ್ಟರೋಗಕ್ಕೆ ಬಲಿಯಾಗಿ ಜನಮನಗಳಲ್ಲಿ ತುಂಬಿಕೊಂಡಿರುವ ಭಕ್ತಿ, ಭಾವನೆಗಳನ್ನು ಹತ್ತಿಕ್ಕುವ ಮತ್ತು ಕದಡುವ ಪ್ರಯತ್ನದಲ್ಲಿ ತೊಡಗಿಕೊಂಡಿರುವ ಮತ್ತು ತನ್ಮೂಲಕ ಗುರುತಿಸಿಕೊಳ್ಳಬಯಸುವ ಆಷಾಢಭೂತಿಗಳನ್ನು ಕಂಡು ಪೂಜ್ಯರಿಗೆ ಸುತರಾಂ ಆಗುತ್ತಿರಲಿಲ್ಲ. ಅಂಥವರ ಮಾತುಗಳಿಗೆ ಅವರು ಕಿವಿಯಾಗುತ್ತಿರಲಿಲ್ಲ ಮತ್ತು ಅಂಥವರ ಮೋಡಿಗೆ ಅವರು ಕಣ್ಣಾಗುತ್ತಿರಲಿಲ್ಲ. ಅಂಥವರ ವಿಷಯದಲ್ಲಿ ಅವರು 'ದಿವ್ಯ ಜಿಗುಪ್ಸೆ'ಯನ್ನು ತಳೆದುಕೊಂಡಿದ್ದರು.

ಪ್ರಸ್ತುತ ವ್ಯವಸ್ಥೆಯ ಬಗ್ಗೆ ಪರಮಪೂಜ್ಯರಲ್ಲಿ ತೀವ್ರತರವಾದ ಜಿಗುಪ್ಸೆ ಇತ್ತು. ಜಗತ್ತು ಯಾವ ದಿಶೆಯಲ್ಲಿ ಓಡುತ್ತಿದೆ ಮತ್ತು ಅದೆಷ್ಟೊಂದು ಪ್ರಮಾಣದಲ್ಲಿ ಭ್ರಷ್ಟಗೊಂಡಿದೆ ಎಂಬುವುದು ಅವರಿಗೆ ಚೆನ್ನಾಗಿ ಗೊತ್ತಿತ್ತು. 'ವ್ಯಕ್ತಿತ್ವ'ಗಳು ಬಣ್ಣಗಳಾಗಿ ಹರಿದುಹೋಗುತ್ತಿರುವುದು ಮತ್ತು ಬಣಗಳಾಗಿ ಒಡೆದುಹೋಗುತ್ತಿರುವುದನ್ನು ಕಂಡು ಅವರ ಮನಸ್ಸು ಕೊರಗುತ್ತಿತ್ತು. ಆದರೂ ಅದರೊಳಗಿನ ಆ 'ಒಳಗು' ಮತ್ತು 'ಬೆಳಗು' ಕತ್ತಲೆಯ ಮಧ್ಯದಲ್ಲಿಯೂ ಬೆಳಕನ್ನು ಹುಡುಕುವ ನಿರಂತರ ಪ್ರಯತ್ನದಲ್ಲಿ ತೊಡಗಿಕೊಂಡಿತ್ತು. 'ದೀಪದಂತೆ ಬೆಳಗು'ತ್ತಿದ್ದ ವ್ಯಕ್ತಿತ್ವಗಳು ಇಂದು 'ದ್ವೀಪವಾಗಿ ಮುಳಗಿಹೋಗು'ತ್ತಿರುವುದನ್ನು ಕಂಡು ಅವರ ಅಂತಃಕರಣ 'ಅಯ್ಯೋ ಪಾಪ' ಎನ್ನುತ್ತಿತ್ತು. ಕತ್ತಲೆಯ ಮಧ್ಯದಲ್ಲಿ ಬೆಳಕನ್ನು, ಅಜ್ಞಾನದ ಮಧ್ಯದಲ್ಲಿ ಜ್ಞಾನವನ್ನು, ಮೃತ್ಯುವಿನ ಮಧ್ಯದಲ್ಲಿ ಅಮೃತವನ್ನು, ಕಸದ ಮಧ್ಯದಲ್ಲಿ ರಸವನ್ನು, ವಿಷಮತೆಯ ಮಧ್ಯದಲ್ಲಿ ಸಮತೆಯನ್ನು, ಸಂತೆಯ ಮಧ್ಯದಲ್ಲಿ ನಿಶ್ಚಿಂತೆಯನ್ನು, ವಿರಸದ ಮಧ್ಯದಲ್ಲಿ 'ಸರಸ-ಸಮರ'ಸವನ್ನು ಗ್ರಹಿಸುವ ಮಹಾನುಭಾವ ಮಾತ್ರ ಇಂದು ನೆಮ್ಮದಿಯಿಂದ ಬಾಳಬಲ್ಲ, ಬದುಕಬಲ್ಲ. ಪರಮಪೂಜ್ಯರು ಅಂಥ ಅರ್ಥಪೂರ್ಣ ಬದುಕನ್ನು ತಮ್ಮದಾಗಿಸಿಕೊಂಡಿದ್ದರು. ತಪ್ಪು-ಸರಿಗಳೆರಡನ್ನು ಸಹಿಸಿಕೊಂಡು ಬದುಕಿದ ಹಿರಿಯ ಜೀವ ಅವರದು!!

ಅವರು ಸಾರ್ಥಕ ಶತಾಂಬುಷಿಗಳು. ಪರಮಪೂಜ್ಯರಲ್ಲಿ ಕ್ರಿಯಾಶೀಲತೆಯನ್ನು ಕಂಡಾಗ ಪರಮಪೂಜ್ಯರು ವಯಸ್ಸಿನೊಂದಿಗೆ ಸಾಗುತ್ತಿಲ್ಲ. ವಯಸ್ಸೇ ಅವರ ಒಲವು-ನಿಲವುಗಳನ್ನು ಅರಿತುಕೊಂಡು ಅವರನ್ನನುಸರಿಕೊಂಡು ಸಾಗುತ್ತಿದೆ ಎಂದೆನಿಸದೆ ಇರದು. ಅವರೊಂದು ಭಕ್ತರ ಬಾಳ-ಬಾಂದಳದಲ್ಲಿ ನಿರಂತರವಾಗಿ ಮಿನುಗುವ ಧ್ರುವ ನಕ್ಷತ್ರ. ಅವರ ಸಾಧನೆಯ ಮುಂದೆ ಎಷ್ಟೇ ಉನ್ನತೋನ್ನತ ಮತ್ತು ಉತ್ತಮೋತ್ತಮ ತಲೆಗಳಾದರೂ ಸರಿ, ಅವು ಬಾಗಿ ನಿಂತುಕೊಳ್ಳದೆ ಇರಲಾರವು. ಬರೀ ಪ್ರಧಾನಿ, ಉಪಪ್ರಧಾನಿ, ರಾಷ್ಟ್ರಪತಿ, ಉಪರಾಷ್ಟ್ರಪತಿಗಳಷ್ಟೇ ಅಲ್ಲ. 'ಭಾರತ ರತ್ನ'ಗಳು ಕೂಡ ಅವರ ಮುಂದೆ ತಲೆಬಾಗಿ ಮತ್ತು ಕೈ ಮುಗಿದು ನಿಂತುಕೊಳ್ಳಬೇಕು. ಅದು ಪರಮಪೂಜ್ಯರು ಬೆಳೆದ ಎತ್ತರ.

ಕೊನೆಯಲ್ಲೊಂದು ಮಾತು. ಸಂಸ್ಕೃತ ಸಾರಸ್ವತ ಲೋಕದ ದಿಗ್ಗಜರ ಕುರಿತು ಕವಿಯೊಬ್ಬ ಹೇಳಿದ್ದಾನೆ.

**ಉಪಮಾ ಕಾಲಿದಾಸಸ್ಯ ಭಾರವೇರರ್ಥ ಗೌರವಮ್ ।**
**ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥**

ಅದೇ ರೀತಿ ಈ ಪ್ರಪಂಚದಲ್ಲಿ ಎಲ್ಲಿಯೇ ನಿಂತಾದರೂ ಸರಿ, ದಾಸೋಹ'ವೆಂದರೆ ಸಾಕು, ಥಟ್ಟನೇ ಪರಮಪೂಜ್ಯರ ಪೂಜ್ಯ ನಾಮಧೇಯವು ಜ್ಞಾಪಕಕ್ಕೆ ಬರುತ್ತದೆ. ಅದೇ ರೀತಿ ತಪೋನಿಷ್ಠೆ ಮತ್ತು ಕಾಯಕ ನಿಷ್ಠೆಗೂ ಕೂಡ ಅವರೇ ಪರ್ಯಾಯ. ಕಾಯಕ, ದಾಸೋಹ ಮತ್ತು ತಪಸ್ಸು ಈ ಮೂರು ಗುಣಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಲ್ಲಿ 'ತ್ರಿಮೂರ್ತಿ'ಗಳಂತೆ ಮತ್ತು 'ಪ್ರಸಾದ ತ್ರಯ'ಗಳಂತೆ ಮೇಳೈಸಿಕೊಂಡು ರಾರಾಜಿಸಿಕೊಂಡಿವೆ. ಅವರ ಭವ್ಯ ದಿವ್ಯ ಮತ್ತು ದಿವ್ಯ ಭವ್ಯ 'ಮಹಾಮೇರು ವ್ಯಕ್ತಿತ್ವ'ಕ್ಕೆ ಪ್ರೀತ್ಯಭಿಮಾನಗಳಿಂದ 'ಗೌರವ ಗುಚ್ಛ'ವನ್ನು ಅರ್ಪಿಸಿ ಅನಂದಿಸುವಾ.



ಸಂಶೋಧನಾ ಲೇಖನ

# ಕರ್ಮಸುಜ್ಞಾನ ಶಿವಯೋಗಿ ಶಾಸನೋಕ್ತ ಪರಮಾರಾಧ್ಯ ಸಿದ್ಧರಾಮ

– ಡಾ. ಎಂ.ಜಿ. ನಾಗರಾಜ್ *

*(ಕಳೆದ ಸಂಚಿಕೆಯಿಂದ)*

ಶ್ರೀಕರಭಾಷ್ಯದಲ್ಲಿ 'ಸೌರಮಂಡಲ ಮಧ್ಯಸ್ಥಾ ಸಾಂಬಂ' – ಸೂರ್ಯಮಂಡಲದ ಕೇಂದ್ರವೇ 'ಶಂಭು'. ಹೀಗಾಗಿ ಅವನು ಕಪಿಲೇಶ್ವರನೂ ಆಗಿದ್ದಾನೆ. ಸೌರಸಂಹಿತೆಯ ಶಿವರಹಸ್ಯದಲ್ಲಿ ಲಿಂಗವು ಸೃಜನಾತ್ಮಕ ಶಕ್ತಿ ಎಂದಿದೆ. ಲಿಂಗಪುರಾಣದಲ್ಲಿ 'ಲಿಂಗಮೂರ್ತಿ ಶಿವೋಜ್ಯೋತಿ' ಎಂದಿದೆ. ಈ ಹಿನ್ನೆಲೆಗಳಲ್ಲಿ, ಸಿದ್ಧರಾಮ ಶಿವಯೋಗದ ಮೂಲಕ 'ಯೋಗಿಗಳ ಮನದ ಕೊನೆಯ ಜೋತೀಶ್ವರ'ನನ್ನು ಶುದ್ಧ ಸಿದ್ಧನಾಗಿ ಕಂಡು ಕಪಿಲಸಿದ್ಧಮಲ್ಲಿಕಾರ್ಜುನನನ್ನು ಸಾಧಿಸಿದ್ದಾನೆ. ಶಾಸನಗಳಲ್ಲಿ ಈ ಸಾಧನೆಯ ಕುರುಹಾಗಿ ಬಂದ 'ವಚನ'ವು ಜನಪ್ರಿಯವಾಗಿ ದಾಖಲುಗೊಂಡಿದೆ. 'ಜ್ಯೋತಿಲಿಂಗ'ವಾದ ಕಪಿಲೇಶ್ವರ, ಸಿದ್ಧರಾಮನಲ್ಲಿ ಮಲ್ಲಿಕಾರ್ಜುನನಾಗಿ, 'ಕಪಿಲಸಿದ್ಧಮಲ್ಲಿಕಾರ್ಜುನ' ಎಂಬ ಸಂಗಮ ಶಬ್ದವಾಗಿ ವಚನಾಂಕಿತಗೊಂಡಿದೆ. ಶಾಸನಗಳಲ್ಲಿ ಸ್ತುತಿವಚನ ಹಾಗೂ ಫಲಶ್ರುತಿ ವಾಕ್ಯಗಳಲ್ಲಿ ಸಂಚಲಿತವಾಗಿ, 'ಜ್ಯೋತೀಶ್ವರನು ವ್ರಿಷಭನ ರೂಪಾಗಿ', 'ಯೋಗರಮಣೀಯ ಕ್ಷೇತ್ರವನೆ ... ಅಭಿನವ ಶ್ರೀಶೈಳವನೆ ಮಾಡಿ ಕಪಿಲಸಿದ್ಧ ಮಲ್ಲೇಶ್ವರನೆ ನೆಲಸಿ ನಿಂದು' ಎಂಬ ಶಾಸನೋಕ್ತಿಗೆ, 'ಸೊಂನಲಿಗೆ ಕಪಿಲಸಿದ್ಧ ಮಲ್ಲಿಕಾರ್ಜುನ' ಹದವಾಗಿದ್ದಾನೆ.

ಋಗ್ವೇದ ರುದ್ರವನ್ನು ('... ವೃಷಭ ಮಾಸಹೂತಿ') ವೃಷಭನೆಂದೇ ಸಂಬೋಧಿಸುತ್ತದೆ. ಋಗ್ವೇದದ ವೃಷಭ, ತೇಜೋಮೂರ್ತಿ ಶ್ರೀರುದ್ರ; ಪುರುಷ-ವೃಷಭವಾಚ್ಯನೂ ಹೌದು. ಜೀವನ ದರ್ಶನವನ್ನು ರೂಪಿಸಿ ಬೆಳೆಸಿ ಬೆಳಗಿಸಿದ್ದಾನೆ. ಸಾಮಾಜಿಕ ಪಲ್ಲವಗಳಿಗೂ ಕಾರಣವಾಗಿದ್ದಾನೆ ಎಂದು ಡಾ. ಶ್ರೀ ಜಚನಿ 'ರುದ್ರ-ಭದ್ರ-ರೇಣುಕ' ಕೃತಿಯಲ್ಲಿ ವ್ಯಾಖ್ಯಾನಿಸಿದ್ದಾರೆ[೮]. ಈ ಅಂಶವನ್ನು ಗಮನಿಸಿದರೆ ಶಾಸನದಲ್ಲಿ ಬರುವ 'ಜ್ಯೋತೀಶ್ವರನು ವ್ರಿಷಭರೂಪಾಗಿ' ಶಬ್ದಗಳಿಗೆ ಕಪಿಲಸಿದ್ಧ ಮಲ್ಲಿಕಾರ್ಜುನನ ಸ್ವರೂಪವೂ ವಿದಿತವಾಗುತ್ತದೆ.

ಕ್ರಿ.ಶ.೧೨೦೧ರ ಇಂಡಿ ತಾ. ಕೂಡಿಗಿಯ ಕಲಚೂರಿ ಜಯಪಾಲದೇವನ ಕಾಲದ ಶಾಸನವು[೯] ಸ್ತುತಿವಚನದ ೧೦ ಸಾಲುಗಳನ್ನು ಆರಂಭದಲ್ಲಿಯೆ ಹೊಂದಿದೆ. "ಮನದ ಕೊನೆಯ ಜ್ಯೋತಿಸ್ವರ"ನ್ನು ನೆನೆದಿದೆ. ಜೈತುಗಿಯ ಮಹಾಮಾತ್ಯರು, ಪಟ್ಟಸಾಣಾಧಿಪತದೇವ ದಂಡನಾಯಕರು, ಸೋಮದೇವ ದಂಡನಾಯಕ ಪ್ರಮುಖ ಕರಣಿಕ ಮಾಯಿದೇವನಾಯಕ ಅಭಿನವ ಶ್ರೀಶೈಳ ಕಪಿಲಸಿದ್ಧಮಲ್ಲಿನಾಥದೇವರ ದೇವಸೇವೆ, ಜೀರ್ಣೋದ್ಧಾರ ಇತ್ಯಾದಿಗಳಿಗೆಂದು ದಾನ ನೀಡಿದ ವಿಷಯವಿದೆ. ಸಿದ್ಧರಾಮನ ವಚನ ಹಾಗೂ ಅಂಕಿತವಾದ ಕಪಿಲಸಿದ್ಧ ಮಲ್ಲಿಕಾರ್ಜುನನ ಅಭಿನವ ಶ್ರೀಶೈಳವಾದ ಸೊಂನಲಿಗೆ ದೇಗುಲಕ್ಕೆ ನೀಡಿದ ದಾನ ಒಂದು ರೀತಿ 'ಯೋಗಲಿಂಗ ಹಾಗೂ ಯೋಗರಮಣೀಯ ಕ್ಷೇತ್ರ'ವೆಂಬ ಸಾಂಸ್ಕೃತಿಕ ಭಾವಕ್ಕೆ ನೀಡಿದ ಭಕ್ತಿಯ ಕೊಡುಗೆ ಎನಿಸುತ್ತದೆ. ಅದು ಸೊನ್ನಲಿಗೆಗೂ ದಕ್ಕಿದ ಶಿವಹೃದಯಗಳ ಮಂಗಳ ಕೃತಜ್ಞತೆ.

೧೩ನೆಯ ಶತಮಾನದ ಚಡಚಣ ಶಾಸನದಲ್ಲಿ[೧೦] 'ಶ್ರೀರಾಮನಾಥನೇ ಶರಣು' ಎಂದು ಹೇಳಿ ಆರಂಭದಲ್ಲಿ ಎಂದಿನ ಸಿದ್ಧರಾಮನ ಸ್ತುತಿವಚನವು ದಾಖಲಾಗಿದೆ. [ಜ್ಯೋತೀಸ್ವರ] ಹಾಗೂ ಯೋಗರಮಣೀಯ ಕ್ಷೇತ್ರ ಸೊನ್ನಲಿಗೆಯನ್ನು ಪ್ರಸ್ತಾಪಿಸಿ ವಚನಾಂಕಿತದ ಸೂಚನೆ ನೀಡಿದೆ. ಗಮನಾರ್ಹವಾಗಿ ಸೊಂನಲಿಗೆಯಲ್ಲಿದ್ದ 'ರಾಮನಾಥ' ದೈವಕ್ಕೂ ನಮಿದಿದ್ದಾನೆ. ಬಹುಶಃ ಸಿದ್ಧರಾಮನ ಹೆಸರಿನ ಭಾಗವಾದ 'ರಾಮ' ಶಬ್ದವು 'ಸೊನ್ನಲಿಗೆ' ರಾಮನಾಥ 'ದೇವರಿಗೆ

* ನಂ. ೨೨೧, "ಶ್ರೀ ಜಚನಿ ಕೃಪ" ೬ಲನೇ ಅಡ್ಡರಸ್ತೆ, ರಾಜಾಜಿನಗರ, ಬೆಂಗಳೂರು-೫೬೦೦೧೦

ಅನ್ವಯ'ವಾಗಿದ್ದು 'ಸಿದ್ದ'ರಾಮ ತನ್ನ ಹೆಸರಿನ ಭಾಗ ಮಾಡಿಕೊಂಡು ವಚನೋಕ್ತಿಯಾಗಿಸಿರುವಂತಿದೆ.

ಟಾಕಳಿಯ ತ್ರುಟಿತ ಶಾಸನವು ಸಂಸ್ಕೃತ ಭಾಷೆಯದಾಗಿದ್ದು, ಸಿದ್ಧರಾಮನ ಸ್ತುತಿವಚನವು ಸಂಸ್ಕೃತದಲ್ಲಿ ಪ್ರಕಟವಾಗಿ, ಭಾಷಾಗೌರವವನ್ನು ವಚನಕ್ಕೆ ತೋರಿದೆ. 'ಶ್ರೀ ವಂದೇ ಕಪಿಲಸಿದ್ದ ಮಲ್ಲಿಕಾರ್ಜುನ ಮೀಶ್ವರ' ಎಂದು ಆರಂಭದ ಸಾಲಿನಲ್ಲಿದೆ. ಬೇರೆ ತತ್ಸಂಬಂಧೀ ಶಬ್ದಗಳು ವಿಶೇಷವಾಗಿ 'ವಿಶ್ವರೂಪೋ ವೃಷಸ್ವರೂಪ' (ಜೋತಿಶ್ವರನು ವೃಷಭರೂಪಾಗಿ), ನವ್ಯಶ್ರೀಶೈಲಕೃತ' (ಅಭಿನವ ಶ್ರೀಶೈಳವನೆ ಮಾಡಿ) ಕಪಿಲಸಿದ್ಧ ಮಲ್ಲಿಕಾರ್ಜುನದೇವ, ಈ ಪದಪುಜಗಳು ಕಾಣಬರುತ್ತವೆ.

ಕ್ರಿ.ಶ.೧೧೯೪ರ ಸಂಖ ಶಾಸನವು ಸಿದ್ಧರಾಮನ ವಚನ (ತ್ರುಟಿತ ಭಾಗ) ಹಾಗೂ ಕಪಿಲಸಿದ್ಧ ಮಲ್ಲಿಕಾರ್ಜುನದೇವರಿಗೆ ಊರೊಂದನ್ನು ದಾನ ನೀಡಿದ ವಿಷಯ ಹೇಳಿದೆ. ಕ್ರಿ.ಶ.೧೨೫೭ರ ಜೆಟ್ಟಿಗಿ ಶಾಸನದಲ್ಲಿ ಯಾದವ ಚಕ್ರವರ್ತಿ ಕನ್ನರದೇವನ ಆಳ್ವಿಕೆಯ ಕಾಲದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ ದೇವರ ಸೇವಾದಿಗಳಿಗೆ ಸಾಮಂತ ಮದ್ದಿಗಿದೇವನು ದಾನ ನೀಡಿದ ವಿಷಯವಿದೆ: ಆರಂಭದಲ್ಲಿ ಸಿದ್ಧರಾಮನ 'ಜ್ಯೋತೀಸ್ವರ' ಸ್ತುತಿವಚನ ಹಾಗೂ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗದ ಮಹತಿಯ ವರ್ಣನೆ ಇದೆ. ಶಾಸನದ ಎರಡನೆಯ ಮುಖದಲ್ಲಿ ಕನ್ನರದೇವನ ಸಾಮಂತ ಮದ್ದಗಿದೇವನನ್ನು 'ಸಿವಪಾದಸೇಖರ ಕಲಿಯುಗ ವೀರಭದ್ರಾವತಾರ ಶಿವಸಮಯ ಸಂಪನ್ನ' ಎಂದೆಲ್ಲ ವರ್ಣಿಸಿರುವುದು ಗಮನಾರ್ಹ. ಶಾಸನದ ಈ ಭಾಗದ ಕೊನೆಗೆ 'ದಕ್ಷಿಣ ವಾರಣಾಸಿ ಅಭಿನವ ಶ್ರೀಸೈಳ ಶ್ರೀ ಸೊಂನಲಪುರ ವರಾಧೀಸ್ವರ ಶ್ರೀ ಕಪಿಲಸಿದ್ಧ ಮಲ್ಲಿಕಾರ್ಜುನದೇವರ ಸೇವೆಗೆ 'ದಟ್ಟುಗಿ' ಗ್ರಾಮವನ್ನು ದಾನ ಮಾಡಿದ ಬಗ್ಗೆ ಹೇಳಿದೆ. ಗಮನಾರ್ಹವೆಂದರೆ ಕಪಿಲಸಿದ್ಧ ಮಲ್ಲಿಕಾರ್ಜುನನು (ಹಂಪೆಯ ಪುರವರಾಧೀಶ್ವರ ವಿರೂಪಾಕ್ಷನಾದಂತೆ) ಸೊಂನಲಿಗೆ 'ಪುರವರಾಧೀಶ್ವರ' ನಾಗಿರುವುದಾಗಿದೆ. ಅಂದರೆ ಸೊಂನಲಿಗೆ ಸಂಬಂಧದ ಸಕಲ ವ್ಯವಹಾರವು ಅವನ ಆಣತಿಯಂತೆಯೇ ನಡೆಯುತ್ತದೆ ಎಂಬ ಧ್ವನಿ ಅಲ್ಲಿದೆ. ಜನತೆಯೂ ಸಿದ್ಧರಾಮನ ಆಶಯದಂತೆ ನಡೆದುಕೊಳ್ಳುತ್ತಿತ್ತು ಎಂಬ ಸೂಚನೆಯೂ ಇಲ್ಲಿ ಧ್ವನಿತವಾದಂತಿದೆ.

ನಿರ್ದಿಷ್ಟ ವರ್ಷದ(ಕಾಲ) ಉಲ್ಲೇಖವಿಲ್ಲದ ಯಾದವ ಸಿಂಘಣನ ಕಾಲದ ಗುಂಡಕರ್ಜಗಿ ಶಾಸನವು ಆರಂಭದ ಸಿದ್ಧರಾಮನ ಜ್ಯೋತಿಸ್ವರ ಸ್ತುತಿವಚನ ಹೊಂದಿದೆ. ಕ್ರಿ.ಶ.೧೨೫೬ರ ಘಡಕೆನೂರು ಶಾಸನವು ಎಂದಿನ ಸಿದ್ಧರಾಮನ ಜ್ಯೋತೀಶ್ವರ ಸ್ತುತಿವಚನದಿಂದ ಆರಂಭಗೊಂಡು, ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ ಗ್ರಾಮದಾನ, ಭೂದಾನ ನೀಡಿದ ವಿವರಗಳನ್ನು ಹೊಂದಿದೆ. ಸಿದ್ಧರಾಮನ ಭಕ್ತಿ ಹಾಗೂ ಶೌರ್ಯ ಕಾರ್ಯಗಳನ್ನು, ವಿಶಿಷ್ಟ ವರ್ಣನೆಗಳ ಮೂಲಕ ಬಿಂಬಿಸಿ ಅವನ ವ್ಯಕ್ತಿತ್ವವನ್ನು ಕಡೆದಿದೆ. ಅನಾದಿಸಿದ್ಧ, ಜಗತ್ಪ್ರಸಿದ್ಧ, ಬೇಳ್ವ ಭಕ್ತಜನಮನೋನ್ನತ ಕಳಾಪ್ರಸಂನನುಂ, ಆತ್ಮಜ್ಯೋತಿನಿದರ್ಪಣ ಸ್ವಚ್ಛ, ಸಿದ್ಧಕುಳವಾರ್ಧಿವರ್ದ್ಧನ ಸುಧಾಕರನುಂ, ರಾಮಕುದ್ದಾಳನುಂ, ಪರಮಾರಾಧ್ಯನುಂ, ಸ್ವಚ್ಛಂದ ಮೃತ್ಯುಂಜಯಂ, ಎಂದೆಲ್ಲ ದಾಖಲಿಸಿರುವಲ್ಲಿ ಸಿದ್ಧರಾಮನ ಮಹೋನ್ನತ ವ್ಯಕ್ತಿತ್ವದ ಚಿತ್ರಣ ಸಿಗುತ್ತದೆ. ಶಾಸನದ ಕೊನೆಯ ಸಾಲುಗಳಲ್ಲಿ ಪಡಿಯಕನೂರ ಮೂಲರಸರು ಸೊಂನಲಿಗೆಯಪುರ ಶ್ರೀರಾಮನಾಥ ದೇವರಿಗೆ ದತ್ತಿ ಬಿಟ್ಟ ವಿಷಯವಿದೆ. ಈ ರಾಮನಾಥನ ಹೆಸರಿನ ಅಂಶ ಸೊನ್ನಲಿಗೆ 'ಸಿದ್ಧರಾಮ'ನ ಹೆಸರಿನಲ್ಲಿ ಕೂಡಲವಾಗಿರುವುದೂ ಗಮನಕ್ಕೆ ಬರುತ್ತದೆ.

ಕ್ರಿ.ಶ.೧೨೧೧ರ ಸಿಂಘಣದೇವನ ಕಾಲದ ಸರೂರು ಶಾಸನದಲ್ಲಿ ಕೋಡಿಯ ಮಲ್ಲಿಕಾರ್ಜುನ ದೇವರಿಗೆ ಸರೂರ ಅರಳಿಗೆರೆಯ ಸಿದ್ಧರಾಮ ತಂದೆ ಪ್ರತಿಷ್ಠೆ ಮಾಡಿ ಭೂದಾನ ಗೃಹದಾನ ಮಾಡಿರುವ ವಿಷಯವಿದ್ದು, ಜನಸಾಮಾನ್ಯರಲ್ಲಿ ಸಿದ್ಧರಾಮನ ಹೆಸರಿನ ಅನುರಣನ ಕಾಣಬರುತ್ತದೆ. ಹೀಗೆಯೇ ಕಟಕನೂರ ಶಾಸನದಲ್ಲಿ 'ಜಗದ್ಯೆಕ ಗುರುಸಿದ್ಧರಾಮ', 'ನಿಜದ ಪುರುಷಲಿಂಗಂ ಸನ್ನುತ ಗುರು ಸಿದ್ಧರಾಮ', ಕ್ರಿ.ಶ.೧೨೫೬ರ ಬುಡರಸಂಗಿ ಶಾಸನದಲ್ಲಿ 'ಪರಮಗುರು ಸಿದ್ಧರಾಮ' ಎಂದೆಲ್ಲ ಹೇಳಿ ಸಿದ್ಧರಾಮನಲ್ಲಿ ಗುರು ಶ್ರೇಷ್ಠತೆಯನ್ನು ಕಂಡ ಭಕ್ತಿ ಗೌರವವನ್ನು ಜನತೆ ಶಾಸನಗಳ ಮೂಲಕ ಐತಿಹಾಸಿಕತೆಯನ್ನು ಮೂಡಿಸಿರುವುದು ವಿಶಿಷ್ಟವಾಗಿದೆ.



ಕ್ರಿ.ಶ.೧೨೫೬ರ ಶಿವಮೊಗ್ಗ ಜಿಲ್ಲೆ ಸೊರಬದ ಶಾಸನದಲ್ಲಿ 'ಸಂಸಾರದ ಸರ್ಪನ ಅಣಲೊಳಗಿಹೆನಯ್ಯ । ಆವಾಗ ನುಂಗಿತೆಂಬುದನರಿಯೆ । . . . . ಅದರ ಬಾಯಿಂದ ತೆಗೆದು ಕಾಯಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಸಿದ್ಧರಾಮನ ಆರಾಧ್ಯನಲ್ಲಿ ಬಿನ್ನಹವಿದೆ. ಈ ಸೊರಬ ಶಾಸನದ ಸದ್ಯದ ಪಠ್ಯವು ಸಿದ್ಧರಾಮನ ವಚನವನ್ನೇ ಹೋಲುವಂತಿದೆ. ಆದರೆ ತುಸು ಪಾಠಾಂತರ ಕಾಣುತ್ತದೆ. ಸಿದ್ಧರಾಮೇಶ್ವರ ವಚನ ಸಂಪುಟದ ೧೦೫೧ನೇ ವಚನವು (ಕ.ಪು.ಪ್ರಾ.೩೦೩) ಇಂತಿದೆ.

**ಸಂಸಾರವೆಂಬ ರಾಹುವಿನ ಅಣಲೊಳಗೆ ಇದ್ದೆನಯ್ಯಾ**
**ಆವಾಗ ನುಂಗಿತೆಂದರಿಯೆ, ಆವಾಗ**
**ಉಗುಳಿತೆಂದರಿಯೆನಯ್ಯಾ**
**ಅದರ ಬಾಯಿಂದೆನ್ನ ತೆಗೆದು ಕಾಯಯ್ಯಾ**
**ಕಪಿಲಸಿದ್ಧ ಮಲ್ಲಿಕಾರ್ಜುನ.**

ವಚನದಲ್ಲಿ 'ರಾಹುವಿನ ಅಣಲೊಳಗೆ' ಎಂದಿದ್ದರೆ, ಶಾಸನದಲ್ಲಿ 'ಸರ್ಪನ ಅಣಲೊಳಗೆ' ಎಂದಿದ್ದು, ಶಾಸನದ ಉಳಿದ ಪಾಠವು ಹೆಚ್ಚು ಕಡಿಮೆ ವಚನವನ್ನು ಹೋಲುತ್ತದೆ. ಈ ವಚನವನ್ನು ಕ್ರಿ.ಶ.೧೨೫೬ರ ಶಾಸನದ ಮೊದಲು ಪ್ರಚಲಿತವಿದ್ದ ಸಿದ್ಧರಾಮನ ವಚನಗಳಿಂದ ಆರಿಸಿಕೊಂಡಿತೊ? ಅಥವಾ ಸಂಪುಟದ ಪಾಠವು ತುಸು ಪಾಠಾಂತರಗೊಂಡ ವಚನದ ತಾಡೋಲೆಗಳಿಂದ ಆರಿಸಿಕೊಂಡಿತೋ ಎಂಬುದು ಸ್ಪಷ್ಟವಿಲ್ಲ. ಆದರೆ ವಚನಪಾಠದ ಐತಿಹಾಸಿಕತೆಯನ್ನು ಶಾಸನದಲ್ಲಿ ಮೊದಲಿಗೆ ೧೨೫೬ರಲ್ಲಿಯೇ ದಾಖಲಾಗುವಂತೆ ಕಂಡರಣೆಯಾಗಿರುವುದು ಸ್ಪಷ್ಟ. ಇನ್ನೊಂದು ಮುಖ್ಯ ವೈಶಿಷ್ಟ್ಯವೆಂದರೆ, ಶಾಸನಗಳಲ್ಲಿ ಸಾಮಾನ್ಯವಾಗಿ ಆರಂಭಕ್ಕೆಯ ಕಪಿಲಸಿದ್ಧ ಮಲ್ಲಿಕಾರ್ಜುನನ ಕುರಿತಂತೆ 'ಜ್ಯೋತೀಶ್ವರ ಸ್ತುತಿವಚನ' ಮಾತ್ರ ಕಂಡುಬರುತ್ತದೆ. ಆದರೆ ಸೊರಬ ಶಾಸನದಿಂದ ಸಿದ್ಧರಾಮನ ಇನ್ನೊಂದು ವಚನವೂ ಶಾಸನಸ್ಥವಾಗಿರುವುದೂ ಕಾಣಬರುತ್ತದೆ. ಇದಲ್ಲದೆ ಶಾಸನಗಳಿಂದ ಅವನ ಜೀವನ ದೃಷ್ಟಿಯೂ ಸಾಂಸಾರಿಕ ಸಂಬಂಧವನ್ನೂ ಹೇಗೆ ಕಾಣ ಬೇಕೆಂಬುದನ್ನೂ ಧ್ವನಿಸುತ್ತಿತ್ತು ಎಂಬುದು ತಿಳಿಯುತ್ತದೆ.

ಮಹಾರಾಷ್ಟ್ರದ ಕನ್ನಡ ಶಾಸನಗಳ ಪೈಕಿ, ಕ್ರಿ.ಶ.೧೨೧೮ರ ಇಟ್ಗಲ್ ಶಾಸನವು ಸಿದ್ಧರಾಮನ 'ಜೋತಿಸ್ವರ'ನ ಸ್ತುತಿವಚನದಿಂದ ಆರಂಭಗೊಂಡು, ಅಭಿನವ ಶ್ರೀಶೈಲವಾದ ಸೊಂನಲಿಗೆಯಲ್ಲಿ, ಕಪಿಲಸಿದ್ಧ ಮಲ್ಲೇಶ್ವರನ ಪ್ರತಿಷ್ಠೆಯ ವಿಷಯ ಹಾಗೂ ದಾನದ ಆಶಯಸಹಿತ ಹೇಳಿ ಸೇವುಣ ದೊರೆ ಸಿಂಘಣನ ಕಾಲದ ಘಟನೆಯನ್ನು ನಿರೂಪಿಸಿದೆ. ಸಾಮಾಜಿಕ-ದೈವಿಕ ಸಂಸ್ಕೃತಿಯ ಚಿತ್ರಣವೂ ಇಲ್ಲಿ ಕಂಡುಬರುತ್ತದೆ.

ಕ್ರಿ.ಶ.೧೧೯೮ರ ಕೇಸ್‌ಗಾಂವ್ ಶಾಸನವು ಸಿದ್ಧರಾಮನ ಜೋತೀಶ್ವರ ಸ್ತುತಿವಚನದಿಂದ ಆರಂಭಗೊಂಡು ಸೊಂನಲಿಗೆ ಶ್ರೀ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರಿಗೆ ದೇವಸೇವೆಗಾಗಿ ನೀಡಿದ ಗ್ರಾಮದಾನದ ವಿಷಯವಿದ್ದು, ಶಾಪಾಶಯದ ನಿಷ್ಠುರ ವಾಕ್ಯದಲ್ಲಿ ದಾನವನ್ನು ಹಾನಿ ಮಾಡಿದಲ್ಲಿ ಒದಗುವ ಗತಿಯನ್ನು ನಿರೂಪಿಸಲಾಗಿದೆ.

ಕ್ರಿ.ಶ.೧೧೯೫ರ ಜಾಮಗಾಂವ್ ಶಾಸನದಲ್ಲಿ ಎಂದಿನ ಆರಂಭಕ್ಕೆ ಸಿದ್ಧರಾಮನ ಜೋತೀಸ್ವರ ಸ್ತುತಿವಚನ ಹಾಗೂ ಕಪಿಲಸಿದ್ಧ ಮಲ್ಲಿಕಾರ್ಜುನ ದೇಗುಲಕ್ಕೆ ಛತ್ರಕ್ಕೆ ನೀಡಿದ ದಾನದ ವಿವರವಿದೆ. 'ಗುರುಸಿದ್ಧರಾಮನಾಥ' ಎಂಬ ಪದಪುಂಜವು ಗಮನ ಸೆಳೆಯುತ್ತದೆ. ಸಿದ್ಧರಾಮನನ್ನು ಗುರುವಾಗಿ ಭಾವಿಸಿದ್ದ ಜನತೆಯ ಆಶಯವೂ ತಿಳಿಯುತ್ತದೆ. ಇದಲ್ಲದೆ ದಕ್ಷಿಣ ವಾರಣಾಸಿ ಅಭಿನವ ಶ್ರೀಶೈಳವೆನಿಪ ಸೊನ್ನಲಿಗೆಪುರವನ್ನು 'ಮಹಾಸಿದ್ಧಕ್ಷೇತ್ರ' ಎಂಬ ಅಭಿಧಾನವಿರಿಸಿ ಕರೆದಿರುವುದು ಸಿದ್ಧರಾಮನ ಸಿದ್ಧಿಯೇ ಸರಿ.

ಕ್ರಿ.ಶ.೧೧೯೨ರ ನೀಲೆಗಾಂವ್ ಶಾಸನವು, ಸೇವುಣ ಚಕ್ರವರ್ತಿ ಭಿಲ್ಲಮನ ಕಾಲದ್ದಾಗಿ, ಎಂದಿನ ಆರಂಭದ ಜ್ಯೋತೀಶ್ವರ ಸ್ತುತಿವಚನವು ಅಭಿನವ ಶ್ರೀಶೈಲವಾದ ಸೊಂನಲಿಗೆಯ ಕಪಿಲಸಿದ್ಧ ಮಲ್ಲೇಶ್ವರದೇವರ ಅಂಕಿತದಲ್ಲಿ ಮೂಡಿಬಂದಿದೆ. ಮಾನ್ಯ, ಭೂದಾನ, ನಿಧಿದಾನಗಳನ್ನು ಈ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಕ್ಕೆ ಹಸ್ತೋದಕ, ಮಾಡಿಕೊಟ್ಟಿರುವುದು ಗಮನಾರ್ಹ. ಕೊನೆಯಲ್ಲಿ 'ಚಾಮುಂಡಿದೇವಿಯ ಲಬ್ಧವರಪ್ರಸಾದರಾದ ಶಿಲಾಹಾರ ಕುಲಕಮಳ'ನಾದ ಮಹಾಮಂಡಲೇಶ್ವರ ದಾಂಕರಸ ಮಲ್ಲಿದೇವರಸರು, ಅಭಿನವ ಶ್ರೀಶೈಳವೆನಿಪ್ಪ ಸೊಂನಲಿಗೆ ಕಪಿಲಸಿದ್ಧ ಮಲ್ಲಿಕಾರ್ಜುನದೇವರ ಸೇವೆಗೆ,





ಜೀರ್ಣೋದ್ಧಾರ, ಆವಾರಿಛತ್ರಕ್ಕೆಂದು ದಾನದತ್ತಿಯನ್ನು ಶಾಪಾಶಯಪೂರ್ವಕವಾಗಿ ನೀಡಿ ದೇವಭಕ್ತಿಯನ್ನು ತೋರಿದ್ದಾರೆ. ಚಾಮುಂಡಿದೇವಿಯ ಭಕ್ತರಾಗಿ ಶಿವ(ಶರಣ)ಸಾನ್ನಿಧ್ಯಕ್ಕೂ ದಾನಾದಿಗಳನ್ನು ನೀಡಿ ಸಿದ್ಧರಾಮಕ್ಷೇತ್ರದ ದೈವಿಕ ಸೌಹಾರ್ದದ ಮಾದರಿ ತೋರುವಂತೆ ನಡೆದುಕೊಂಡಿದ್ದಾರೆ.

ಕ್ರಿ.ಶ.೧೨೫೫ರ ಅಕ್ಕಲಕೋಟೆ ಶಾಸನವು[23] ಆರಂಭದಲ್ಲಿ ಸಿದ್ಧರಾಮನ ವಚನವಿದ್ದ ಬಗ್ಗೆ ಸೂಚನೆ ನೀಡಿದ್ದು (ತ್ರುಟಿತ). ಕಪಿಲಸಿದ್ಧಮಲ್ಲೇಶ್ವರದೇವಕ್ಷೇತ್ರಕ್ಕೆ ವಿಷ್ಣುವಂಶೋದ್ಭವರಾದ ಸೇವುಣ ದೊರೆಗಳೂ ಕೂಡ ಪರಮಭಕ್ತರಾಗಿ ದಾನಾದಿಗಳನ್ನು ನೀಡಿರುವುದನ್ನು ಸೂಚಿಸಿದೆ.

ಸೇವುಣ ದೊರೆ ಕನ್ನರದೇವನ ಕಾಲಕ್ಕೇ (ಕಾಲದ ನಮೂದು ಶಾಸನದಲ್ಲಿ ಇಲ್ಲ) ಸೇರಿದ ತಡವಾಳ ಶಾಸನವು[24] ಸಿದ್ಧರಾಮನ ಜೋತೀಸ್ವರ ಸ್ತುತಿವಚನ ಹೊಂದಿದ್ದು, ಯೋಗರಮಣೀಯ ಕ್ಷೇತ್ರದ ಶ್ರೀಮನುಮಹಾಕಪಿಲಸಿದ್ಧ ಮಲ್ಲೇಶ್ವರ ದೇವರಿಗೆ, -ಕನ್ನರದೇವನ ಅಧಿಕಾರಿಗಳಾದ ಚೇಟರಸ, ಕೂಚರಸ, ಸೋಯಿದೇವ, ಈ ಲಿಂಗಕ್ಕೆ ಹಸ್ತೋದಕ ಮಾಡಿ ದಾನ ನೀಡಿರುವುದನ್ನು ಶಾಸನದ ಎರಡನೆ ಭಾಗದಲ್ಲಿ ಹೇಳಿದೆ. ಮೊದಲ ಭಾಗದಲ್ಲಿ 'ಸೊನ್ನಲಿಗೆ' ಸ್ಥಳನಾಮ ಬರದೆ 'ಯೋಗರಮಣೀಯ ಕ್ಷೇತ್ರ'ವೆಂದಷ್ಟೆ, ವಚನದಲ್ಲಿ ಸೂಚಿಸಿದೆ.

ಕ್ರಿ.ಶ.೧೧೭೧ರ ಶಿವಾನಿ ಶಾಸನದಲ್ಲಿ[25] ವಚನೋಕ್ತಿ ಸೂಚಿತವಾಗಿಲ್ಲ, ಸೋವಿದೇವನ ಪಟ್ಟಮಹಾದೇವಿ ಹಾಲರದೇವಿ ಮುಂತಾದವರು, ಕೂಡಿ, ಶ್ರೀಪರ್ವತದ ಶ್ರೀ ಸ್ವಯಂಭು ಮಲ್ಲಿಕಾರ್ಜುನದೇವರಿಗೆ' ದಾನಾದಿಗಳನ್ನು ನೀಡಿದ ವಿಷಯವಿದೆ.

ಕ್ರಿ.ಶ.೧೧೩೬ರ ಸೊಲ್ಲಾಪುರ ನಗರದ ಶಾಸನ[26] ಬಿಜ್ಜಳ ಹಾನುಗಲ್ಲು ಕೋಟೆಯನ್ನು ಆಕ್ರಮಿಸಿದ ಮೇಲೆ, ಮಹಾಪ್ರಧಾನ ಕನ್ನಪಯ್ಯನಾಯಕ ಪ್ರಾರ್ಥನೆ ಮೇರೆಗೆ, ಸೊನ್ನಲಿಗೆಯಲ್ಲಿ ಶ್ರೀ ಕನ್ನೇಶ್ವರ, ಚಟ್ಟೇಶ್ವರ, ಮಲ್ಲಿಕಾರ್ಜುನ ತ್ರಿಕೂಟ ಶಿವಾಲಯವನ್ನು ಕಟ್ಟಿಸಿದ ಬಗ್ಗೆ ಹೇಳಿದೆ. ತಡವಾಳ ಶಾಸನದ ರೀತ್ಯಾ ಕನ್ನರದೇವನ ಆಳ್ವಿಕೆ ಯೋಗರಮಣೀಯ ಕ್ಷೇತ್ರದಲ್ಲಿತ್ತು. ಬಹುಶಃ ಅಂಥ ಕ್ಷೇತ್ರವಾದ ಸೊಂನಲಿಗೆಯಲ್ಲಿ ಮೊದಲಿಗೆ ಅವನ ಹೆಸರಿನಲ್ಲಿ 'ಕನ್ನೇಶ್ವರ' ದೇಗುಲ; ಹಾಗೇಯೆ ಅವನ ಪ್ರಿಯ ಅಧಿಕಾರಿ ಚೇಟರಸನ ಹೆಸರಿನಲ್ಲಿ (ಜನಪದ ರೂಢಿಯಲ್ಲಿ) ಚಟ್ಟೇಶ್ವರ ಲಿಂಗಸಹಿತವಾಗಿ ಹಾಗೂ ನಂತರ ಮಲ್ಲಿಕಾರ್ಜುನ ಲಿಂಗವನ್ನು ಸೇರ್ಪಡೆ ಮಾಡಿರಬಹುದು. ಕ್ರಿ.ಶ.೧೧೩೬ರಲ್ಲಿ ಬಿಜ್ಜಳನ ಪ್ರಿಯ ಅಧಿಕಾರಿ ಕನ್ನಪಯ್ಯನು ಬಹುಶಃ ಮೂರೂ ಲಿಂಗಗಳನ್ನು ಸೇರಿಸಿ ಕಟ್ಟುವಲ್ಲಿ ಅದನ್ನು ತ್ರಿಕೂಟ ದೇವಾಲಯವಾಗಿ ರೂಪಿಸಿದನೆನ್ನಬೇಕು. ಸಿದ್ಧರಾಮನ ಕಾಲಕ್ಕೆ ಮೂರು ಲಿಂಗಗಳು ಪ್ರಸಿದ್ಧಿಯಾಗಿದ್ದ ಕಾರಣ 'ತ್ರೈಲಿಂಗ'ವೆಂದು ಸಿದ್ಧರಾಮನಲ್ಲಿ ಪರಿಗಣಿತವಾಗಿ ಅವನ ವಚನದಲ್ಲಿ ಕಾಣಿಸಿಕೊಂಡಿತೆನ್ನಬೇಕು.

*(ಮುಂದುವರೆಯುತ್ತದೆ)*

ಅಡಿಟಿಪ್ಪಣಿಗಳು :

೧೦. ಡಾ. ಜಚನಿ, ರುದ್ರ-ಭದ್ರ-ರೇಣುಕ, ೧೯೮೫, ಮಾಮಿಡಿ ಪ್ರಕಾಶನ, ಬೆಂಗಳೂರು, ಪು.೪, ೫.
೧೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೧೦, ಬಿಜಾಪುರ ಜಿಲ್ಲೆ, ಅದೇ., ಇಂಡಿ ೧೪, (ಕೂಡಿಗೆ, ಕ್ರಿ.ಶ.೧೨೦೧) ಕ.ವಿ.ವಿ. ಹಂಪಿ.
೧೨. ಅದೇ., ಇಂಡಿ ೨೦, (ಚಡಚಣ, ಕ್ರಿ.ಶ. ಸು ೧೩ನೇ ಶತಮಾನ)
೧೩. ಅದೇ., ಇಂಡಿ ೨೫ (ಟಾಕಳಿ)
೧೪. ಅದೇ., ಇಂಡಿ, ೬೮ (ಸಂಕ, ಕ್ರಿ.ಶ.೧೧೯೪)
೧೫. ಅದೇ., ಮುದ್ದೆಬೀಹಾಳ ೨೧ (ಜೆಟ್ಟಿಗಿ, ಕ್ರಿ.ಶ.೧೨೫೭)
೧೬. ಅದೇ., ಮುದ್ದೆಬೀಹಾಳ ೨೪ (ಗುಂಡಕರ್ಜಗಿ, ಯಾದವ ಸಿಂಘಣನ ಕಾಲ)
೧೭. ಅದೇ., ಮುದ್ದೆಬೀಹಾಳ ೩೩ (ಫಡಕೆನೂರು, ಕ್ರಿ.ಶ.೧೨೫೬)
೧೮. ಅದೇ., ಮುದ್ದೆಬೀಹಾಳ ೫೮ (ಸರೂರು, ಕ್ರಿ.ಶ.೧೨೧೦)
೧೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೬, ಮಹಾರಾಷ್ಟ್ರದ ಕನ್ನಡ ಶಾಸನಗಳು, ಇಟ್ಕಲ್ (೧೦), ಕ್ರಿ.ಶ.೧೨೧೭
೨೦. ಅದೇ., ಕೇಸಗಾಂವ್ (೧೨), ಕ್ರಿ.ಶ.೧೧೯೮
೨೧. ಅದೇ. ಜಾಮಗಾಂವ್ (೧೩) ಕ್ರಿ.ಶ.೧೧೯೫
೨೨. ಅದೇ., ನೀಲೆಗಾಂವ್ (೧೪) ಕ್ರಿ.ಶ.೧೧೯೨
೨೩. ಅದೇ., ಅಕ್ಕಲಕೋಟೆ (೧೧೬) ಕ್ರಿ.ಶ.೧೨೫೫
೨೪. ಅದೇ., ಅಕ್ಕಲಕೋಟೆ ೧೨೪ (ತಡವಾಳ, ಸೇವುಣ ಕನ್ನರನ ಕಾಲ)
೨೫. ಅದೇ, ಅಕ್ಕಲಕೋಟೆ ೧೩೩ (ಶಿವಾನಿ, ಕ್ರಿ.ಶ.೧೧೭೧)
೨೬. ಅದೇ., ಅಕ್ಕಲಕೋಟೆ ತಾ.೧೩೪ (ಸೊಲ್ಲಾಪುರ ನಗರ, ಕ್ರಿ.ಶ.೧೧೩೬)





# ಕರ್ನಾಟಕ ಏಕೀಕರಣದ ನೆಲೆಗಳು - ಒಂದು ಅವಲೋಕನ

- ಡಾ. ಎಚ್.ಎಸ್. ಗೋಪಾಲ ರಾವ್ *

ಒಡೆದುಹೋಗಿದ್ದ ಕರ್ನಾಟಕವನ್ನು ಒಂದು ಮಾಡುವ ಪ್ರಯತ್ನ ರಾಜಪ್ರಭುತ್ವದ ಸಂದರ್ಭದಲ್ಲಿ ಆಗಲೇ ಇಲ್ಲ. ಯಾವುದೇ ರಾಜಪ್ರಭುತ್ವವು ಯುದ್ಧಗಳ ನೆಪದಲ್ಲಿ ಅಥವಾ ಅಧಿಕಾರ ವಿಸ್ತರಣೆಯ ನೆಪದಲ್ಲಿ ಯುದ್ಧ ಮಾಡುತ್ತ ರಾಜ್ಯ ವಿಸ್ತರಣೆ ಮಾಡಿಕೊಂಡಿತು. ಯಾವುದೇ ರಾಜ್ಯದ ಗಡಿಗಳು ಎಂದಿಗೂ ಸ್ಥಿರವಾಗಿರುವುದಿಲ್ಲ. ಆದರೆ ಒಂದು ಸಂಸ್ಕೃತಿಯ ಗಡಿಗಳು ಹೆಚ್ಚೂ ಕಡಿಮೆ ಸ್ಥಿರವಾಗಿಯೇ ಇರುತ್ತವೆ. ಅಲ್ಲಿ ರಾಜ ಅಥವಾ ಅವನ ಅಧಿಕಾರ ಮುಖ್ಯವಾಗಿರುವುದಿಲ್ಲ. ಆ ಪ್ರದೇಶದಲ್ಲಿ ಬಾಳಿ ಬದುಕಿದ ಜನ ಮುಖ್ಯರಾಗುತ್ತಾರೆ. ಅವರ ಸಾಂಸ್ಕೃತಿಕ ಕುರುಹುಗಳೇ ಗಡಿಯಾಗುತ್ತವೆ. ಭಾರತದಲ್ಲಿ ಪ್ರಜಾಪ್ರಭುತ್ವ ಆಡಳಿತ ಪದ್ಧತಿ ಇರಲೇ ಇಲ್ಲ ಎಂದು ವಾದಿಸುವುದು ಸುಲಭ. ಒಪ್ಪಿಕೊಳ್ಳುವುದು ಕಷ್ಟ. ಪ್ರಭುತ್ವದ ವಿಷಯವನ್ನು ಚರ್ಚಿಸುವಾಗ ಆಳುತ್ತಿರುವವರು ಯಾರು ಎಂಬ ಪ್ರಶ್ನೆ ಮುಖ್ಯವಾಗಿರುತ್ತದೆ. ಆಳುವವರನ್ನು ಪರಿಗಣಿಸಿದಾಗ ಭಾರತದಲ್ಲಿ ಹೆಚ್ಚಿಗೆ ಇದ್ದುದು ರಾಜಪ್ರಭುತ್ವ ಎಂದು ಒಪ್ಪಿಕೊಳ್ಳಬೇಕಾದ್ದು ಅನಿವಾರ್ಯ. ಆಡಳಿತ ಮತ್ತೊಂದು ತುದಿಯಲ್ಲಿರುವ ಆಳಿಸಿಕೊಳ್ಳುವವರನ್ನು ಪರಿಗಣಿಸಿದಾಗ ಭಾರತದಲ್ಲಿ ಈ ಹಿಂದೆ ಎಂದಿಗೂ ಪ್ರಜಾಪ್ರಭುತ್ವ ಇರಲಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಪ್ರಜೆಗಳಿಗೆ ಅನಾನುಕೂಲವಾಗುವಂತೆ, ಹಿಂಸೆಯಾಗುವಂತೆ, ಅವರನ್ನು ಶೋಷಿಸುತ್ತಲೇ ಆಳ್ವಿಕೆ ನಡೆಸಿದ ಪ್ರಭುಗಳ ಸಂಖ್ಯೆ ಕಡಿಮೆ. ಪ್ರಜೆಗಳ ಹಿತಕ್ಕೆ ಧಕ್ಕೆಯಾಗದಂತೆ, ತಮ್ಮ ಪ್ರತಿಷ್ಠೆಗೂ ಕುಂದು ಬಾರದಂತೆ ತಮ್ಮ ಅಧಿಕಾರ, ದರ್ಪ ಮತ್ತು ಶ್ರೀಮಂತಿಕೆಯನ್ನು ಹೆಚ್ಚಿಸಿಕೊಳ್ಳುತ್ತಲೇ ಬೆಳೆದ ರಾಜರು ತಮ್ಮ ಪ್ರಜೆಗಳ ಒಳಿತಿಗಾಗಿ ಅನೇಕ ಪ್ರಮುಖ ಗುಡಿಕೈಗಾರಿಕೆಗಳ ಸ್ಥಾಪನೆಗೆ ಅವಕಾಶ ಕಲ್ಪಿಸಿದ್ದಾರೆ. ನೀರಾವರಿ ಸೌಲಭ್ಯವನ್ನು ವಿಸ್ತರಿಸಿದ್ದಾರೆ. ಹಿಂದೆ ಪ್ರಜೆಗಳಿಗಾಗಿ ರಾಜ ಅಧಿಕಾರ ನಡೆಸುತ್ತಿದ್ದ. ಅವನ ಪ್ರೀತಿ ಕಡಿಮೆ ಆಗಿರಲಿಲ್ಲ. ಈಗ ಪ್ರಜೆಗಳಿಗಾಗಿ ಪ್ರಜೆಗಳೇ ಅಧಿಕಾರ ನಡೆಸುವ ಸರ್ಕಾರಗಳಿವೆ.

ಭಾರತದ ಬಹುತೇಕ ಭಾಗಗಳನ್ನು ಬ್ರಿಟಿಷರು ವಶಪಡಿಸಿಕೊಂಡರು. ರಾಜರುಗಳ ಆಡಳಿತ ಕೊನೆಗೊಂಡಿತು. ಬ್ರಿಟಿಷರು ಭಾಗಶಃ ಭಾರತವನ್ನು ಆಳಿದರು. ಬಹುತೇಕ ಭಾರತದ ಎಲ್ಲ ರಾಜ್ಯಗಳೂ ಒಂದಲ್ಲ ಒಂದು ರೀತಿಯಲ್ಲಿ ಬ್ರಿಟಿಷರ ಪ್ರತ್ಯಕ್ಷ ಅಥವಾ ಪರೋಕ್ಷ ಆಳ್ವಿಕೆಗೆ ಸೇರಿತ್ತು. ತಮಗೆ ಸೇರಿದ ಪ್ರದೇಶಗಳನ್ನು ತಮಗೆ ಇಷ್ಟ ಬಂದಂತೆ ಆಳತೊಡಗಿದರು. ನಿಜಾಮನ ಪ್ರದೇಶವನ್ನು ಮರಾಠರಿಂದ ಪಡೆದ ಪ್ರದೇಶಗಳ ಜೊತೆಗೆ ಸೇರಿಸಿದರು. ಕರ್ನಾಟಕ ಭಾಗಗಳನ್ನು ಮರಾಠಾ ಸಂಸ್ಥಾನಗಳೊಂದಿಗೆ ಸೇರಿಸಿದರು. ಬಂಗಾಳದ ಪರಿಸ್ಥಿತಿಯೂ ಹೀಗೆಯೇ ಇತ್ತು. ಮುಂಬಯಿ ಆಳ್ವಿಕೆಗೆ ಮರಾಠಾ, ಕನ್ನಡ, ಗುಜರಾತೀ ಭಾಷಿಕ ಪ್ರದೇಶಗಳೆಲ್ಲವೂ ಸೇರಿದ್ದವು. ಇದು ಬ್ರಿಟಿಷರಿಗೂ ತಿಳಿದಿತ್ತು. ಇಂತಹ ಭೌಗೋಳಿಕ ವಿಂಗಡಣೆಯು ಸರಿಯಲ್ಲ ಎಂದು ಅನೇಕ ಬ್ರಿಟಿಷ್ ರಾಜತಂತ್ರಜ್ಞರೂ ತಿಳಿದಿದ್ದರು. ಇದನ್ನು ಸರಿಪಡಿಸುವ ಪ್ರಯತ್ನಗಳೂ ನಡೆದಿದ್ದವು. ಭಾರತವನ್ನು ಭಾಷಿಕವಾಗಿ ಐದು ವಿಭಾಗಗಳನ್ನಾಗಿ ವಿಂಗಡಿಸುವುದು ಸೂಕ್ತ ಎಂಬ ಅಭಿಪ್ರಾಯ ಜಾನ್ ಬ್ರೈಟ್ ಎಂಬ ಸಂಸದನದಾಗಿತ್ತು. ೧೮೫೮ರಲ್ಲಿ ಅವನು ಬ್ರಿಟನ್ ಸಂಸತ್ತಿನಲ್ಲಿ ಈ ವಿಷಯವನ್ನು ಮಂಡಿಸಿದ್ದ. ಅದರ ಫಲವಾಗಿಯೇ ೧೮೬೨ರಲ್ಲಿ ಮುಂಬಯಿ ಕರ್ನಾಟಕ ಪ್ರದೇಶದ ರಚನೆಯಾಯಿತು ಮತ್ತು ೧೮೭೪ರಲ್ಲಿ ಬಂಗಾಳದಿಂದ ಅಸ್ಸಾಂ ಪ್ರತ್ಯೇಕ ಆಯಿತು. ಇದೆಲ್ಲವನ್ನೂ ಕರ್ನಾಟಕದಲ್ಲಿನ ಕೆಲವು ಗಣ್ಯರು ಗಮನಿಸುತ್ತಿದ್ದರು. ಈ ಗಣ್ಯರು ನೇರವಾಗಿ ಯಾವುದೇ ರಾಜಕೀಯ ಗುಂಪಿಗೆ ಸೇರಿದವರಾಗಿರಲಿಲ್ಲ. ಪ್ರಧಾನವಾಗಿ ಕನ್ನಡವನ್ನು ಮಾತನಾಡುವ ಜನರು ಬೇರೆ ಬೇರೆ ಆಡಳಿತಗಳಲ್ಲಿ ಸೇರಿಹೋಗಿರುವುದು ಈ ಗಣ್ಯರಿಗೆ ಸರಿ ಎನಿಸಲಿಲ್ಲ. ತಮಗೆ ಏನೂ ಅರ್ಥವಾಗದ ಭಾಷೆಯಲ್ಲಿ ಸರ್ಕಾರದ ಸೂಚನೆಗಳನ್ನು ಆದೇಶಗಳನ್ನು ಸ್ವೀಕರಿಸಬೇಕಾಗಿತ್ತು. ಇದನ್ನು ಪ್ರಶ್ನಿಸುವ ಸ್ವಾತಂತ್ರ್ಯವೂ ಜನರಿಗಿರಲಿಲ್ಲ. ಇದನ್ನು ಹೇಗಾದರೂ ಸರಿಪಡಿಸಬೇಕು ಎಂಬುದು ಆ ಗಣ್ಯರಿಗೆ ಆದ್ಯತೆಯ ಕೆಲಸವಾಯಿತು. ಇದನ್ನು ಹೇಗೆ ಸರಿಪಡಿಸಬೇಕು ಎಂಬ ಪ್ರಯತ್ನದಲ್ಲಿ ಆ ಗಣ್ಯರಿಗೆ ಮೊದಲು ಆಗಲೇಬೇಕಾದ್ದು ಸಾಂಸ್ಕೃತಿಕ ಐಕ್ಯತೆ ಎನಿಸಿತು. ಕನ್ನಡಿಗರೆಲ್ಲರೂ ಸಾಂಸ್ಕೃತಿಕವಾಗಿ ಒಂದಾದರೆ,

* ಇತಿಹಾಸ ತಜ್ಞರು, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ

ನಂತರ ಆಡಳಿತಾತ್ಮಕ ಐಕ್ಯತೆಯನ್ನು ಸಾಧಿಸಬಹುದೆಂಬ ತಿಳುವಳಿಕೆ ಆ ಗಣ್ಯರದಾಗಿತ್ತು. ಆದ್ದರಿಂದ ಕರ್ನಾಟಕ ಏಕೀಕರಣದ ಮೊದಲ ನೆಲೆಯು ಸಾಂಸ್ಕೃತಿಕ ನೆಲೆಗಟ್ಟಾಯಿತು.

**ಮೊದಲ ನೆಲೆಗಟ್ಟು : ಸಾಂಸ್ಕೃತಿಕ**

ಭಾಷೆಯು ಜನರನ್ನು ಒಗ್ಗೂಡಿಸುವ ಕೆಲಸವನ್ನು ಅತ್ಯಂತ ಯಶಸ್ವಿಯಾಗಿ ಮಾಡುತ್ತದೆ. ಜಾತಿ, ಮತಗಳ ಭೇದವನ್ನು ತೊಡೆಯಲು ಭಾಷೆಯು ಪ್ರಮುಖ ಸಾಧನ. ಸಂಸ್ಕೃತಿ ಎಂದರೆ ಅದರಲ್ಲಿ ಸಾಹಿತ್ಯ ಮತ್ತು ಕಲೆಯ ವಿವಿಧ ಪ್ರಕಾರಗಳು ಸೇರಿಕೊಳ್ಳುವುದರಿಂದ ಆ ಮೂಲಕ ಜನರನ್ನು ಒಂದು ಮಾಡಿದರೆ ಆಡಳಿತಾತ್ಮಕ ಐಕ್ಯಕ್ಕೆ ಹಾದಿ ಸುಗಮವಾಗುತ್ತದೆ ಎಂಬುದು ಆ ಗಣ್ಯರ ಅಭಿಪ್ರಾಯ ವಾಗಿದ್ದಂತೆ ತೋರುತ್ತದೆ. ಭಾಷೆಯ ಶಕ್ತಿಯನ್ನು ಸರಿಯಾಗಿ ತಿಳಿದ ಅಂದಿನ ಜನರ ಅಭಿಪ್ರಾಯವನ್ನು ಇಂದಿಗೂ ಗೌರವಿಸಲಾಗುತ್ತದೆ. ಕನ್ನಡ ಕುಟುಂಬಗಳ ಲಗ್ನಪತ್ರಿಕೆಗಳು ಮರಾಠೀ ಲಿಪಿಯಲ್ಲಿರುತ್ತಿದ್ದವು. ಎಂದರೆ, ಅಂದಿನ ಭಾಷಿಕ ಪರಿಸ್ಥಿತಿಯನ್ನು ಊಹಿಸುವುದು ಕಷ್ಟವಲ್ಲ. ಭಾಷೆ ಮಾತ್ರ ಕನ್ನಡ; ಲಿಪಿ ಮರಾಠಿ.

ಇಂತಹ ಪರಿಸ್ಥಿತಿಯಲ್ಲಿ ಕನ್ನಡದ ಏಳ್ಗೆಗಿಂತಲೂ ಉಳಿವಿಗೆ ಹೆಚ್ಚು ಶ್ರಮಿಸಬೇಕಾದ ಅವಶ್ಯಕತೆ ಇತ್ತು. ಮೊದಲಿಗೆ ಕನ್ನಡಿಗರನ್ನು ಒಗ್ಗೂಡಿಸುವ ಕೆಲಸವನ್ನು ಯಶಸ್ವಿಗೊಳಿಸಬೇಕಾಗಿತ್ತು. ಉತ್ತರ ಕರ್ನಾಟಕದ ಎಷ್ಟೋ ಜನರಿಗೆ ಕನ್ನಡ ಸಾಹಿತ್ಯದ ಬಗ್ಗೆಯೂ ಸ್ಪಷ್ಟವಾದ ಕಲ್ಪನೆ ಇರಲಿಲ್ಲ. ಕನ್ನಡವು ಒಂದು ಶಿಷ್ಟ ಭಾಷೆ. ಅದಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಮಾತ್ರವಲ್ಲದೆ, ಕನ್ನಡ ಭಾಷೆಯನ್ನು ಆಡುವ ಜನ ನೆಲೆಗೊಂಡಿರುವ ಪ್ರದೇಶಕ್ಕೆ ಒಂದು ಸಮೃದ್ಧ ಇತಿಹಾಸ ಇದೆ ಎಂಬ ಕಲ್ಪನೆಯೂ ಬಹುತೇಕ ಜನರಿಗೆ ಇರಲಿಲ್ಲ. ಇಂತಹ ವಿಷಮ ಪರಿಸ್ಥಿತಿಯಲ್ಲಿ ಕನ್ನಡಿಗರನ್ನು ಒಂದು ಮಾಡುವ ಮತ್ತು ಆ ಮೂಲಕ ಕರ್ನಾಟಕವನ್ನು ಒಂದು ಮಾಡುವ ಕೆಲಸ ಆಗಬೇಕಾಗಿತ್ತು. ಉತ್ತರ ಕರ್ನಾಟಕದಲ್ಲಿನ ಮರಾಠೀ ದೇಸಾಯಿಗಳು ಮತ್ತು ಜಹಗೀರುದಾರರ ಹಿಡಿತದಿಂದ ಕರ್ನಾಟಕವನ್ನು ಬಿಡುಗಡೆ ಮಾಡಿ ಕರ್ನಾಟಕ ಏಕೀಕರಣಕ್ಕೆ ಅವಕಾಶ ಕಲ್ಪಿಸಲು ಬೇಕಾದ ಸಿದ್ಧತೆಗಳು ಆಗಬೇಕಾಗಿತ್ತು.

ಪೇಶ್ವಾ ಜನರಿಂದ ಕರ್ನಾಟಕವನ್ನು ಮುಕ್ತಗೊಳಿಸಬೇಕಾಗಿತ್ತು. ಮೊದಲಿನಿಂದಲೂ ಉತ್ತರ ಕರ್ನಾಟಕ ತಮ್ಮದೂ ಎಂಬ ತಪ್ಪು ಗ್ರಹಿಕೆ ಆ ಭಾಗದ ಅಧಿಕಾರದ ಚುಕ್ಕಾಣಿ ಹಿಡಿದಿದ್ದ ದೇಸಾಯಿ ಮತ್ತು ಜಹಗೀರುದಾರರುಗಳಿಗಿತ್ತು. ೧೯ನೆಯ ಶತಮಾನದ ಮೊದಲು ತಮ್ಮ ಭಾಷೆಯೇ ಹೆಚ್ಚು ಬಳಕೆಯಲ್ಲಿರಲಿಲ್ಲ ಎಂಬ ತಿಳುವಳಿಕೆಯೂ ಅವರಿಗಿರಲಿಲ್ಲ. ಜೊತೆಗೆ ಬ್ರಿಟಿಷ್ ಅಧಿಕಾರಿಗಳು ಉತ್ತರ ಕರ್ನಾಟಕದ ಪ್ರದೇಶಗಳನ್ನು ದಕ್ಷಿಣ ಮಹಾರಾಷ್ಟ್ರ ಎಂದು ಸಂಬೋಧಿಸಿ, ಅದು ಮರಾಠಾ ಪ್ರದೇಶ ಎಂಬ ಭಾವ ದೃಢಗೊಳ್ಳಲು ಅವಕಾಶ ಕಲ್ಪಿಸಿದ್ದರು. ಅಲ್ಲದೆ, ಬ್ರಿಟಿಷರು ಆ ಭಾಗದ ಅಧಿಕಾರ ವಹಿಸಿಕೊಂಡ ಮೇಲಂತೂ ಪ್ರಾದೇಶಿಕ ಅಧಿಕಾರ ಮರಾಠಾ ದೇಸಾಯಿಗಳದೇ ಆಗಿತ್ತು. ಆಳುವ ಜನ ಮರಾಠೀ ಭಾಷಿಕರು ಮತ್ತು ಆಳಿಸಿಕೊಳ್ಳುವವರು ಕನ್ನಡ ಭಾಷಿಕರು; ಇಂತಹ ವಿಪರ್ಯಾಸದ ಸ್ಥಿತಿಯಲ್ಲಿ ಆಡಳಿತಾತ್ಮಕವಾಗಿ ಕನ್ನಡಕ್ಕೆ ಹೆಚ್ಚಿನ ಸ್ಥಾನ-ಮಾನ ಅತ್ಯವಶ್ಯಕ ಎಂದು ಸರ್ ವಾಲ್ಟರ್ ಎಲಿಯಟ್, ಜಾನ್.ವಿ.ಡನ್ಲಪ್, ಗ್ರೀನ್‌ಹಿಲ್, ರಸೆಲ್, ಜೆ.,ಎಫ್.ಫ್ಲೀಟ್ ಮುಂತಾದ ಬ್ರಿಟಿಷ್ ಅಧಿಕಾರಿಗಳು ಹಾಗೂ ಡೆಪ್ಯುಟಿ ಚೆನ್ನಬಸಪ್ಪ, ವಿರೂಪಾಕ್ಷಪ್ಪ ಹೂಲಿ ಅವರಂತಹ ಶಿಕ್ಷಣ ತಜ್ಞರು ಮನಗಂಡು, ಆ ನಿಟ್ಟಿನಲ್ಲಿ ಕಾರ್ಯಸಾಧನೆಗೆ ವೇದಿಕೆಯನ್ನು ಸಿದ್ಧಗೊಳಿಸುತ್ತಿದ್ದರು. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಪರಿಸ್ಥಿತಿಯು ಮತ್ತಷ್ಟು ವಿಲಕ್ಷಣವಾಗಿತ್ತು. ಹೈದರಾಬಾದ್ ನಿಜಾಂನ ಆಳ್ವಿಕೆಗೆ ಸೇರಿದ್ದ ಪ್ರದೇಶಗಳಲ್ಲಿ ಹೆಚ್ಚಿನ ಅಧಿಕಾರಿಗಳು ಮುಸಲ್ಮಾನರೇ ಆಗಿದ್ದರು. ಆಡಳಿತ ಭಾಷೆ ಮಾತ್ರವಲ್ಲದೆ, ಶಿಕ್ಷಣದ ಭಾಷೆಯಾಗಿಯೂ ಉರ್ದು ಮೇಲುಗೈ ಸಾಧಿಸಿತ್ತು.

ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮದರಾಸ್ ಅಧಿಪತ್ಯಕ್ಕೆ ಸೇರಿದ್ದರೂ, ಕನ್ನಡಕ್ಕೆ ಮುಖಭಂಗ ವಾಗುವಂತಹ ಪರಿಸ್ಥಿತಿ ಇರಲಿಲ್ಲ. ಅಲ್ಲಿ ಕನ್ನಡದ ಗೌರವಕ್ಕೆ ಚ್ಯುತಿ ಬರದಂತೆ ನಿರಂತರ ಎಚ್ಚರ ವಹಿಸಿದ್ದವರು ದಕ್ಷಿಣ ಕನ್ನಡದ ತುಳು ಭಾಷಿಕ ಜನ. ವಿಭಜಿತ ಕರ್ನಾಟಕದಲ್ಲಿ ಹೆಚ್ಚು ಭಾಷಿಕ ಆತಂಕಗಳಿದ್ದುದು ಮುಂಬಯಿ ಅಧಿಪತ್ಯಕ್ಕೆ ಸೇರಿದ್ದ ಪ್ರದೇಶಗಳಲ್ಲಿ. ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ನಿಜಾಮನ ಆಳ್ವಿಕೆಯ ವಿರುದ್ಧ ಧ್ವನಿ ಎತ್ತುವ ಸಾಧ್ಯತೆಯೂ ಇಲ್ಲದಿದ್ದುದರಿಂದ ಅಲ್ಲಿ ಏನೇ ಆಗಬೇಕಿದ್ದರೂ, ಅದು ಮುಚ್ಚು ಮರೆಯಲ್ಲಿ ಆಗಬೇಕಾಗಿತ್ತು. ನೇರವಾಗಿ ಯಾವುದೇ ಪ್ರಯತ್ನ ಆಗುವಂತಿರಲಿಲ್ಲ.



ಇಂತಹ ಪರಿಸ್ಥಿತಿಯಲ್ಲಿ ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆ ಆಯಿತು. ಕರ್ನಾಟಕ ವಿದ್ಯಾವರ್ಧಕ ಸಂಘವು ತನ್ನ ಧ್ಯೇಯೋದ್ದೇಶಗಳಿಗೆ ತಕ್ಕಂತೆ ಹನ್ನೊಂದಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿತು. ೧೮೯೬ರಲ್ಲಿ 'ವಾಗ್ಭೂಷಣ' ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ, ಆ ಮೂಲಕ ೭೫ಕ್ಕೂ ಹೆಚ್ಚು ಗ್ರಂಥಗಳನ್ನು ಬೆಳಕಿಗೆ ತಂದಿತು. ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಪಾರಿತೋಷಕಗಳಿಗೆ ಗ್ರಂಥಗಳನ್ನು ಆಹ್ವಾನಿಸಿ, ೧೯೦೦ ರಿಂದ ೧೯೫೦ರವರೆಗೆ ೧೭೫ ಗ್ರಂಥಕರ್ತರಿಗೆ ಧನರೂಪದಲ್ಲಿ ಬಹುಮಾನ ನೀಡಿ ಪ್ರೋತ್ಸಾಹಿಸಿತು. ಧಾರವಾಡದ ಸುತ್ತಮುತ್ತಲೂ ಕನ್ನಡ ಭಾಷೆಗೆ ಹೊಸ ಚೇತನ ನೀಡಿದ ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆ ಮತ್ತು ಬೆಳವಣಿಗೆ ಹಿನ್ನೆಲೆಯಲ್ಲಿ ರಾ.ಹ. ದೇಶಪಾಂಡೆಯವರ ಜೊತೆಗೆ ಇನ್ನೂ ಅನೇಕ ಗಣ್ಯರಿದ್ದರು.

ಕನ್ನಡ ಗ್ರಂಥಗಳ ರಚನೆ ಮತ್ತು ಪ್ರಕಟಣೆಗೆ ಪ್ರೋತ್ಸಾಹ ನೀಡಿದ ಕರ್ನಾಟಕ ವಿದ್ಯಾವರ್ಧಕ ಸಂಘವು ಕನ್ನಡ ಭಾಷೆಯ ಏಕರೂಪತೆಯ ಬಗ್ಗೆ ಆಸ್ಥೆ ವಹಿಸಿತು. ಆಡುವ ಮಾತಿನಲ್ಲಿ ಏಕರೂಪತೆ ಇಲ್ಲದಿದ್ದರೂ, ಗ್ರಂಥಸ್ಥ ಭಾಷೆಯಲ್ಲಾದರೂ ಏಕರೂಪತೆ ಅವಶ್ಯಕತೆ ಎಂಬುದು ಉತ್ತರ ಕರ್ನಾಟಕದ ಅನೇಕ ಬರಹಗಾರರದಾಗಿತ್ತು. ಆ ಕಾರಣದಿಂದಲೇ ಕರ್ನಾಟಕ ವಿದ್ಯಾವರ್ಧಕ ಸಂಘವು ೧೯೦೭ರ ಜೂನ್ ತಿಂಗಳ ಮೊದಲ ವಾರದಲ್ಲಿ ಧಾರವಾಡದಲ್ಲೇ ಅಖಿಲ ಕರ್ನಾಟಕದ ಮಟ್ಟದ ಗ್ರಂಥಕರ್ತರ ಮೊದಲ ಸಮ್ಮೇಳನವನ್ನು ಹಮ್ಮಿಕೊಂಡಿತು. ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವು ನಡೆಸಿದ ಮೊದಲ ಕನ್ನಡ ಗ್ರಂಥಕರ್ತರ ಸಮ್ಮೇಳನದಂತೆಯೇ ಬೆಂಗಳೂರಿನಲ್ಲಿ ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯು ಎರಡನೆಯ ಗ್ರಂಥಕರ್ತರ ಸಮ್ಮೇಳನವನ್ನು ನಡೆಸಲು ಉದ್ದೇಶಿಸಿತು. ಕಾರಣಾಂತರಗಳಿಂದ ಎರಡನೆಯ ಸಮ್ಮೇಳನವನ್ನು ಮೈಸೂರು ಸರ್ಕಾರದ ವಿದ್ಯಾ ಇಲಾಖೆಯು ಬೆಂಗಳೂರಿನಲ್ಲಿ ನಡೆಸಲು ಸಾಧ್ಯವಾಗಲಿಲ್ಲ. ಆ ಸಮ್ಮೇಳನವನ್ನೂ ಕರ್ನಾಟಕ ವಿದ್ಯಾವರ್ಧಕ ಸಂಘವೇ ಧಾರವಾಡದಲ್ಲಿ ೧೯೦೮ರ ಜುಲೈ ಹತ್ತನೆಯ ತಾರೀಕು ನಡೆಸಿತು. ಗ್ರಂಥಕರ್ತರ ಮೂರನೆಯ ಸಮ್ಮೇಳನ ವಾದರೂ ಬೆಂಗಳೂರಿನಲ್ಲಿ ನಡೆಯಬೇಕೆಂಬ ಆಸೆ ಅನೇಕ ಗಣ್ಯರಿಗಿತ್ತು. ಅಂತಹ ಆಸಕ್ತ ಗಣ್ಯರ ಉದ್ದೇಶ ಸಫಲಗೊಳ್ಳುವ ಸಲುವಾಗಿಯೇ ಬೆಂಗಳೂರಿನಲ್ಲಿ ಸ್ಥಾಪಿತವಾದದ್ದು ಕರ್ನಾಟಕ ಸಾಹಿತ್ಯ ಪರಿಷತ್ತು.

ಮೊದಲಿಗೆ ಮತ್ತು ಕೊನೆಯವರೆಗೂ ಸಾಹಿತ್ಯಿಕ ಚಟುವಟಿಕೆಗಳ ಮೂಲಕ ಕರ್ನಾಟಕ ಏಕೀಕರಣಕ್ಕೆ ಅಚ್ಚುಕಟ್ಟಾದ ಮತ್ತು ಬಲವಾದ ವೇದಿಕೆಯನ್ನು ಸಿದ್ಧಪಡಿಸಿದ ಕರ್ನಾಟಕ ವಿದ್ಯಾವರ್ಧಕ ಸಂಘವು ರಾಜಕೀಯದಿಂದ ದೂರವೇ ಉಳಿಯಿತು. ಆ ದಿನಗಳಲ್ಲಿ ರಾಷ್ಟ್ರೀಯ ಹೋರಾಟವು ಪ್ರಬಲವಾಗಿದ್ದರೂ, ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪಕರಲ್ಲಿ ಅನೇಕರು ರಾಷ್ಟ್ರೀಯ ಹೋರಾಟದ ಮುಂಚೂಣಿಯಲ್ಲಿದ್ದರೂ, ತಮ್ಮ ರಾಷ್ಟ್ರೀಯ ವಿಚಾರಧಾರೆಯು ಸಂಘದಲ್ಲಿ ಪ್ರವೇಶಿಸದಂತೆ ಎಚ್ಚರ ವಹಿಸಿದ್ದರು. ತನ್ನ ಸಭೆಗಳಲ್ಲಿ ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದ ಗೊತ್ತುವಳಿಯನ್ನು ಸ್ವೀಕರಿಸುವ ಕೆಲಸವನ್ನು ಮಾತ್ರ ಸಂಘವು ಮಾಡುತ್ತಿತ್ತು.

ಕರ್ನಾಟಕ ವಿದ್ಯಾವರ್ಧಕ ಸಂಘವು ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆಗೂ ಕಾರಣವಾಯಿತು. ಹೀಗೆ ಕನ್ನಡ ಸಂಸ್ಕೃತಿಪರ ಸಂಘ-ಸಂಸ್ಥೆಗಳು ಕರ್ನಾಟಕ ಏಕೀಕರಣದ ವಿಷಯದಲ್ಲಿ ಪ್ರಧಾನ ಪಾತ್ರ ವಹಿಸಿದವು. ಅಂತಹ ಸಂಸ್ಥೆಗಳಲ್ಲಿ ಉತ್ತರ ಕರ್ನಾಟಕದ ಕರ್ನಾಟಕ ವಿದ್ಯಾವರ್ಧಕ ಸಂಘವು ಒಂದಾದರೆ, ಮೈಸೂರು ಸಂಸ್ಥಾನದಲ್ಲಿ ಬೆಂಗಳೂರಿನ ಕರ್ನಾಟಕ (ಕನ್ನಡ) ಸಾಹಿತ್ಯ ಪರಿಷತ್ತೂ ಸಹ ಒಂದಾಯಿತು. ಕನ್ನಡ ಗ್ರಂಥಕರ್ತರ ಮೂರನೆಯ ಸಮ್ಮೇಳನವನ್ನು ನಡೆಸಲೇಬೇಕಾದ ಸಂದರ್ಭದಲ್ಲಿ ರೂಪುಗೊಂಡದ್ದು ಕರ್ನಾಟಕ ಸಾಹಿತ್ಯ ಪರಿಷತ್ತು. ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರ ದೂರದರ್ಶಿತ್ವದ ಫಲವಾಗಿ ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪನೆಯಾಯಿತು. ಕನ್ನಡ ಭಾಷಿಕರ ಸಮಗ್ರ ಅಭಿವೃದ್ಧಿಯ ಕನಸು ಕಂಡಿದ್ದ ಎಂ. ವಿಶ್ವೇಶ್ವಯ್ಯನವರು ಮುಂಬಯಿ ಆಧಿಪತ್ಯದಲ್ಲಿ ಮುಖ್ಯ ಎಂಜಿನಿಯರ್ ಆಗಿದ್ದಾಗಲೇ ಆಗ ಮುಂಬಯಿ ಆಧಿಪತ್ಯಕ್ಕೆ ಸೇರಿದ್ದ ಭಟ್ಕಳದಿಂದ ಮೈಸೂರು ಸಂಸ್ಥಾನದ ಜೋಗ್‌ವರೆಗೆ ರಸ್ತೆಯ ನಿರ್ಮಾಣ ಮಾಡಿಸಿ, ಮುಂಬಯಿ ಆಧಿಪತ್ಯ ಮತ್ತು ಮೈಸೂರು ಸಂಸ್ಥಾನಗಳಿಗೆ ಸಾರಿಗೆ ಸಂಪರ್ಕ ಕಲ್ಪಿಸಿದ್ದರು.

ಎಂ. ವಿಶ್ವೇಶ್ವರಯ್ಯ, ಎಚ್.ವಿ. ನಂಜುಂಡಯ್ಯ ಅವರಂತಹ ಅಧಿಕಾರಿಗಳ ಸಹಕಾರ ಮತ್ತು

ಪ್ರೋತ್ಸಾಹಗಳ ಫಲವಾಗಿ ಕರ್ನಾಟಕ ಭಾಷಾ ಪರಿಷ್ಕರಣ, ಭಾಷೋನ್ನತಿಯನ್ನು ಪ್ರಮುಖ ಉದ್ದೇಶವಾಗಿಟ್ಟುಕೊಂಡು ಸ್ಥಾಪಿತವಾದ ಕರ್ನಾಟಕ ಸಾಹಿತ್ಯ ಪರಿಷತ್ತಿಗೆ ಅಂದಿನ ಸರ್ಕಾರ ಮತ್ತು ರಾಜಕುಟುಂಬದ ಪೋಷಣೆಯೂ ಇತ್ತು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ 'ವಾಗ್ಭೂಷಣ'ದಂತೆ ಬೆಂಗಳೂರಿನ ಕರ್ನಾಟಕ ಸಾಹಿತ್ಯ ಪರಿಷತ್ತಿನ **'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'** ಮತ್ತು **'ಕನ್ನಡ ನುಡಿ'** ಪತ್ರಿಕೆಗಳೂ ಕರ್ನಾಟಕ ಏಕೀಕರಣ ವಿಚಾರದಲ್ಲಿ ಅತ್ಯಂತ ಮಹತ್ವದ ಪಾತ್ರ ವಹಿಸಿದವು. ಕರ್ನಾಟಕದ ಬಹುತೇಕ ವಿದ್ವಾಂಸರು ಮೇಲೆ ಉಲ್ಲೇಖಿಸಿದ ಪತ್ರಿಕೆಗಳ ಮೂಲಕ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ, ಕರ್ನಾಟಕ ಏಕೀಕರದ ಅನಿವಾರ್ಯತೆ ಮತ್ತು ಅವಶ್ಯಕತೆಗಳನ್ನು ಮಂಡಿಸುತ್ತಿದ್ದರು.

ಕರ್ನಾಟಕ ಏಕೀಕರಣದ ಹಿನ್ನಲೆಯಲ್ಲಿ ಆಲೂರು ವೆಂಕಟರಾಯರ **'ಕರ್ನಾಟಕ ಗತ ವೈಭವ'** ಕೃತಿಯು ಅತ್ಯಂತ ಮಹತ್ವದ ಸ್ಥಾನ ಪಡೆದಿದೆ. ಕರ್ನಾಟಕದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಚಾರಗಳನ್ನು ಓದುಗರು ರೋಮಾಂಚನ ಗೊಳ್ಳುವಂತೆ ನಿರೂಪಿಸಿದ ಆಲೂರು ವೆಂಕಟರಾಯರು ಅದೇ ಕಾರಣದಿಂದ **'ಕನ್ನಡ ಕುಲಪುರೋಹಿತ'** ಎನಿಸಿಕೊಂಡರು. ಆಲೂರು ವೆಂಕಟರಾಯರು ಕನ್ನಡ ದೀಕ್ಷೆಯನ್ನು ಪಡೆದಿದ್ದು ಬಾಲ ಗಂಗಾಧರ ತಿಲಕರಿಂದ ಎಂಬ ವಿಚಾರವೂ ಕುತೂಹಲಕಾರಿಯಾದದ್ದು. ಗೋಪಾಲಕೃಷ್ಣ ಗೋಖಲೆ ಅವರ ನಿಧನಕ್ಕೆ ಸಂತಾಪ ಸೂಚಿಸುವ ಸಂದರ್ಭದಲ್ಲಿ ಮರಾಠೀ ಭಾಷೆಯಲ್ಲಿ ಮಾತನಾಡಲು ಆರಂಭಿಸಿದ ಆಲೂರು ವೆಂಕಟರಾಯರಿಗೆ ಸ್ಥಳೀಯ ಕನ್ನಡ ಭಾಷೆಯಲ್ಲಿ ಮಾತನಾಡಿ ಅದರ ಹಕ್ಕನ್ನು ಸ್ಥಾಪಿಸಲು ತಿಲಕರು ಸಲಹೆ ನೀಡಿದ್ದರು.

ಕರ್ನಾಟಕ ಸಾಹಿತ್ಯ ಪರಿಷತ್ತಿನ ಹೆಸರು ಕೆಲವು ವರ್ಷಗಳ ನಂತರ ಕನ್ನಡ ಸಾಹಿತ್ಯ ಪರಿಷತ್ತು ಎಂದು ಬದಲಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಪ್ರತಿ ಸಮ್ಮೇಳನದಲ್ಲೂ ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ಗೊತ್ತವಳಿಗಳನ್ನು ಸ್ವೀಕರಿಸಲಾಗುತ್ತಿತ್ತು. ಮೈಸೂರು ಸಂಸ್ಥಾನವನ್ನು ಹೊರತುಪಡಿಸಿ ಉಳಿದ ಆಳ್ವಿಕೆಯ ಕನ್ನಡ ಭಾಷಿಕ ಪ್ರದೇಶಗಳಲ್ಲಿ ಕನ್ನಡ ಭಾಷೆ ಮತ್ತು ಕನ್ನಡ ಜನರು ಎದುರಿಸುತ್ತಿದ್ದ ತೊಂದರೆಗಳ ಬಗ್ಗೆ ವಿಚಾರ ವಿನಿಮಯ ಆಗುತ್ತಿತ್ತು.

'ವಾಗ್ಭೂಷಣ', 'ಕನ್ನಡ ನುಡಿ' ಮತ್ತು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಗಳೇ ಅಲ್ಲದೆ, 'ಜಯ ಕರ್ನಾಟಕ', 'ಕರ್ನಾಟಕ ಪತ್ರ', 'ಕರ್ನಾಟಕ ಕೇಸರಿ', 'ಕರ್ನಾಟಕ ವೃತ್ತ', 'ಲೋಕಬಂಧು', 'ಚಂದ್ರೋದಯ', 'ರಾಷ್ಟ್ರಮತ', 'ವಿಹಾರಿ', 'ಕಾಳ', 'ಧಾರವಾಡ ವೃತ್ತ', 'ರಾಜಹಂಸ', 'ವಿಜಯ', 'ಹಿಂದುಸ್ಥಾನ ಸಮಾಚಾರ','ಕನಡಾ ವೃತ್ತ', 'ನುಡಿ', 'ಕರ್ನಾಟಕ ವೈಭವ', 'ವಿಶ್ವ ಕರ್ನಾಟಕ', 'ಕರ್ಮವೀರ', 'ಸಂಯುಕ್ತ ಕರ್ನಾಟಕ', 'ಶಿವಾನುಭವ', 'ಕನ್ನಡಿಗ', 'ರೈತ' ಇತ್ಯಾದಿ ಪತ್ರಿಕೆಗಳು ಕರ್ನಾಟಕ ಏಕೀಕರಣ ಚಳುವಳಿಯ ವಿಚಾರವನ್ನು ಓದುಗರಿಗೆ ನಿರಂತರ ತಲುಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದವು. ಮುಂಬಯಿಯ 'ನುಡಿ', ಬಳ್ಳಾರಿಯ 'ರೈತ' ಪತ್ರಿಕೆಗಳು ಕರ್ನಾಟಕ ಏಕೀಕರಣದ ವಿಷಯದಲ್ಲಿ ತಳೆದ ಆಸಕ್ತಿಯು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿದೆ. ಇಡಿಯಾಗಿ ಕನ್ನಡ ಭಾಷಿಕ ಪ್ರದೇಶದಲ್ಲಿ ಕನ್ನಡಪರ ಧ್ವನಿ ಸದಾ ಕೇಳುವಂತಾಗಲು ಪತ್ರಿಕೆಗಳ ಜೊತೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳೂ ಕಾರಣವಾದವು.

ಕನ್ನಡ ಸಾಹಿತ್ಯ ಪರಿಷತ್ತು ಅಖಿಲ ಕರ್ನಾಟಕ ಮಟ್ಟದ ಸಾಹಿತ್ಯ ಸಮ್ಮೇಳನಗಳನ್ನು ನಡೆಸುತ್ತಾ, ಮೈಸೂರು ಸಂಸ್ಥಾನದ ಹೊರಗಿನ ಕನ್ನಡಿಗರೂ ಕನ್ನಡ ನಮ್ಮದು ಎಂಬ ಭಾವ ತಳೆಯಲು ಏಕೀಕರಣ ಬೇಡಿಕೆಗೆ ಪೂರಕ ವಾತಾವರಣವನ್ನು ಸೃಷ್ಟಿಸಿತು. ಬಳ್ಳಾರಿ ಜಿಲ್ಲೆ ಮತ್ತು ಅದಕ್ಕೆ ಹೊಂದಿಕೊಂಡಂತಿದ್ದ ಕನ್ನಡ ಭಾಷಿಕ ಪ್ರದೇಶಗಳಲ್ಲಿ ಸಾಹಿತ್ಯಿಕ ಸಮ್ಮೇಳನಗಳನ್ನು ನಡೆಸುವ ಮೂಲಕ ಆ ಭಾಗಗಳಲ್ಲೂ ಕನ್ನಡಪರ ಧ್ವನಿಯನ್ನು ಕಾಪಾಡಿಕೊಳ್ಳಲಾಯಿತು. ಈ ನಿಟ್ಟಿನಲ್ಲಿ ಉರವಕೊಂಡದಲ್ಲಿ ೧೯೪೭ರಲ್ಲಿ ನಡೆದ ಪೂರ್ವ ಕರ್ನಾಟಕಸ್ಥರ ಸಮ್ಮೇಳನವು ಮುಖ್ಯವಾದುದು.

**ಎರಡನೆಯ ನೆಲಗಟ್ಟು : ರಾಜಕೀಯ**

ಯಾವುದೇ ಭಾಷಿಕರನ್ನು ಒಂದು ಮಾಡಲು ಸಾಂಸ್ಕೃತಿಕ ವಿಚಾರಗಳು ಸಾಕಾಗುತ್ತವೆ. ಅಂತೆಯೇ ಕನ್ನಡಿಗರನ್ನು ಮಾನಸಿಕವಾಗಿ ಒಂದು ಮಾಡಲು ಸಾಂಸ್ಕೃತಿಕ ವಿಚಾರಗಳು ನೆರವಿಗೆ ಬಂದವು. ಆದರೆ, ಆಡಳಿತಾತ್ಮಕವಾಗಿ ಕನ್ನಡಿಗರನ್ನು ಒಂದುಮಾಡುವ ಪ್ರಯತ್ನ ಮುಂದುವರಿದಿತ್ತು. ಕರ್ನಾಟಕಕ್ಕೆ, ಆ ಮೂಲಕ ಕನ್ನಡಿಗರಿಗೆ ಇರುವ ಪ್ರಾಚೀನ ಸಾಂಸ್ಕೃತಿಕ ಹಿನ್ನೆಲೆಯು ಅತ್ಯಂತ ಶ್ರೀಮಂತವಾದುದು ಎಂಬುದರಲ್ಲಿ ಅನುಮಾನವಿಲ್ಲ. ಅಂತಹ ಶ್ರೀಮಂತ ಸಂಸ್ಕೃತಿಯ ಜನ



ಒಂದೇ ಆಡಳಿತ ಘಟಕದಲ್ಲಿ ಬಾಳಿದರೆ, ಅವರ ಸಂಸ್ಕೃತಿಯ ಮತ್ತಷ್ಟು ಬಲಗೊಳ್ಳುವುದರಲ್ಲಿ ಸಂಶಯ ಇರುವುದಿಲ್ಲ. ಬೇರೆ ಬೇರೆ ಆಡಳಿತಗಳಲ್ಲಿ ಹಂಚಿಹೋಗಿದ್ದ ಕನ್ನಡ ಭಾಷಿಕರನ್ನು ಒಂದೇ ಆಡಳಿತದ ಅಡಿಗೆ ತರುವುದು ಅವಶ್ಯಕ ಎನ್ನುವುದು ಅನೇಕ ಹಿರಿಯ ಕನ್ನಡ ಜೀವಗಳ ಹಂಬಲವಾಗಿತ್ತು. ಅದನ್ನು ಈಡೇರಿಸಲು ಬೇಕಾದ ಸಾಂಸ್ಕೃತಿಕ ನೆಲೆಗಟ್ಟನ್ನು ಭದ್ರಪಡಿಸಿಕೊಂಡ ನಂತರ ಆಡಳಿತಾತ್ಮಕ ಒಗ್ಗೂಡುವಿಕೆಗೆ ಅವಶ್ಯಕವಾದ ರಾಜಕೀಯ ಶಕ್ತಿಯ ನೆರವು ಅತ್ಯವಶ್ಯಕವಾಗಿತ್ತು.

ಕನ್ನಡಿಗರಿಗೆ ತಾವು ಒಡೆದುಕೊಂಡಿದ್ದೇವೆ ಎಂದು ಅರಿವಿಗೆ ಬರುವ ಹೊತ್ತಿಗೆ ಇಡಿಯಾಗಿ ಭಾರತದಾದ್ಯಂತ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಿತ್ತು. ರಾಷ್ಟ್ರೀಯ ಪ್ರಜ್ಞೆ ಜಾಗೃತವಾಗಿದ್ದ ಹೊತ್ತಿನಲ್ಲೇ ಕೆಲವು ಪ್ರದೇಶಗಳಲ್ಲಿ ಬ್ರಿಟಿಷರು ತಮ್ಮ ಅನುಕೂಲಕ್ಕೆ ತಕ್ಕಂತೆ ತಮ್ಮನ್ನು ಭಾಷಿಕವಾಗಿ ವಿಭಜಿಸಿರುವುದನ್ನು ಜನತೆ ಮನಗಂಡಿತ್ತು. ಅದನ್ನು ತೊಡೆದುಹಾಕಿ ತಾವೆಲ್ಲರೂ ಒಂದೇ ಆಡಳಿತದಡಿಯಲ್ಲಿ ಬಾಳುವ ಕನಸು ಕಂಡವರಿಗೆ ಮೊದಲು ಭಾರತದ ಸ್ವಾತಂತ್ರ್ಯ, ನಂತರ ಭಾಷಾವಾರು ಪ್ರಾದೇಶಿಕ ಐಕ್ಯತೆ ಎಂಬ ವಾಸ್ತವ ಅರಿವಿತ್ತು. ಆದ್ದರಿಂದ ಅದನ್ನು ಈಡೇರಿಸಿಕೊಳ್ಳಲು ಬೇಕಾದ ಅವಕಾಶಗಳಿಗಾಗಿ ಕಾದರು; ಅವಕಾಶಗಳು ದೊರೆತಾಗ ಅವುಗಳ ಸದುಪಯೋಗ ಮಾಡಿಕೊಂಡರು.

ಕ್ರಿ.ಶ. ೧೯೦೫ರಲ್ಲಿ ಬಂಗಾಳ ವಿಭಜನೆಯ ನಂತರ ಭಾಷಾವಾರು ಪ್ರಾಂತ ರಚನೆಯ ಸಂಬಂಧವಾಗಿ ಭಾರತದಲ್ಲಿ ಮಾತ್ರವಲ್ಲದೆ ಬ್ರಿಟನ್‌ನಲ್ಲೂ ಚರ್ಚೆಗಳು ಆರಂಭವಾಗಿದ್ದವು. ಬ್ರಿಟನ್ ಸಂಸತ್ತಿನಲ್ಲೂ ಭಾರತದ ಆಡಳಿತಾತ್ಮಕ ವಿಭಜನೆ ಸರಿ ಇಲ್ಲ ಎಂಬ ಆಕ್ಷೇಪ ಇತ್ತು. ೧೯೧೨ರಲ್ಲೇ ಆಗಿನ ಭಾರತದ ಗವರ್ನರ್ ಜನರಲ್ ಭಾರತಕ್ಕೆ ಸಂಬಂಧಿಸಿದ ಕಾರ್ಯದರ್ಶಿಗಳು ಭಾರತವನ್ನು ಭಾಷಾವಾರು ಸ್ವಾಯತ್ತ ಪ್ರಾಂತ್ಯಗಳನ್ನಾಗಿ ವಿಭಾಗಿಸಲು ಇಚ್ಛೆಸಿದ್ದರು. ಇದರ ಫಲವಾಗಿ ನೇಮಕಗೊಂಡ ಮಾಂಟೆಗೋ ಚೆಲ್ಮ್ಸ್‌ಫರ್ಡ್ ಆಯೋಗವು ೧೯೧೮ರಲ್ಲಿ ಸಂವಿಧಾನ ಪರಿಷ್ಕರಣೆಯ ಸಲುವಾಗಿ ಭಾರತದಲ್ಲಿ ಸಂಚರಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಿತು. ಆಗ ಆ ಸಮಿತಿಗೆ ಕರ್ನಾಟಕ ಜನತೆಯೂ ಧಾರವಾಡದಲ್ಲಿ ಮನವಿ ಸಲ್ಲಿಸಿತು. ಮಾಂಟೆಗೋ ಚೆಲ್ಮ್ಸ್‌ಫರ್ಡ್ ಸಲ್ಲಿಸಿದ ವರದಿಯ ಪ್ರಕಾರ ಜನತೆಯ ಅಭಿಪ್ರಾಯವನ್ನು ಪುರಸ್ಕರಿಸಿ ಅವರ ಅಭಿಪ್ರಾಯಕ್ಕೆ ತಕ್ಕಂತೆ ಅವಶ್ಯಕ ಇರುವೆಡೆಗಳಲ್ಲಿ ಪುನರ್ವಿಂಗಡಣೆಗೆ ಅವಕಾಶ ಕಲ್ಪಿಸಿಕೊಳ್ಳಬಹುದಾಗಿತ್ತು. ೧೯೧೯ರಲ್ಲಿ ಬ್ರಿಟಿಷ್ ಮತ್ತು ಭಾರತ ಸರ್ಕಾರಗಳು ಮಾಂಟ್‌ಫೋರ್ಡ್ ವರದಿಯನ್ನು ಒಪ್ಪಿಕೊಂಡವು. ಅದಕ್ಕೆ ಕೇಂದ್ರ ಶಾಸನ ಸಮಿತಿಯ ಒಪ್ಪಿಗೆಯೂ ದೊರೆಯಿತು.

ಭಾರತೀಯ ರಾಷ್ಟ್ರೀಯ ೧೯೨೦ರ ವೇಳೆಗೆ ಪ್ರಾಂತಿಕ ಸಮಿತಿಗಳನ್ನು ರಚಿಸಲು ಮಾಂಟ್‌ಫೋರ್ಟ್ ವರದಿಯು ಸಹಾಯಕವಾಯಿತು. ೧೯೨೦ರ ಮೇ ತಿಂಗಳಿನಲ್ಲಿ ಕರ್ನಾಟಕ ರಾಜಕೀಯ ಪರಿಷತ್ತಿನ ಮೊದಲ ಅಧಿವೇಶನ ಧಾರವಾಡದಲ್ಲಿ ನಡೆಯಿತು. ಅದರ ಅಧ್ಯಕ್ಷತೆ ವಹಿಸಿದ್ದವರು ಮೈಸೂರು ಸಂಸ್ಥಾನದ ನಿವೃತ್ತ ದಿವಾನ್ ವಿ.ಪಿ. ಮಾಧವ ರಾಯರು. ಆ ಅಧಿವೇಶನದಲ್ಲಿ ಸ್ವೀಕೃತವಾದ ನಿರ್ಣಯದ ಪ್ರಕಾರ 'ಮುಂಬಯಿ ಮದ್ರಾಸ್ ಇಲಾಖೆಗಳಲ್ಲಿರುವ ಕನ್ನಡ ಪ್ರದೇಶಗಳನ್ನು ಕೊಡಗು ಹಾಗೂ ಬೇರೆ ಕನ್ನಡ ಪ್ರದೇಶಗಳನ್ನು ಒಟ್ಟುಗೂಡಿಸಿ, ಧಾರವಾಡವನ್ನೇ ರಾಜಧಾನಿಯನ್ನಾಗಿ, ಮಡಿಕೇರಿಯನ್ನು ಸರಕಾರದ ಬೇಸಿಗೆಯ ವಾಸಸ್ಥಾನವಾಗಿ ಮಾಡಿ ಸ್ವತಂತ್ರವಾದ ಬ್ರಿಟಿಷ್ ಕರ್ನಾಟಕ ನಾವು ಮಾಡತಕ್ಕ ಮಹತ್ಕಾರ್ಯ'.

ಬ್ರಿಟಿಷ್ ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ಕರ್ನಾಟಕ ಪ್ರಾಂತಿಯ ಪರಿಷತ್ತಿನ ಸಭೆಗಳು ನಡೆದವು. ೧೯೨೧ರಲ್ಲಿ ಕರ್ನಾಟಕ ಪ್ರಾಂತಿಕ ಸಮಿತಿಯ ರಚನೆಯಾಯಿತು. ಅದರ ಗುರಿಯು ಕರ್ನಾಟಕ ಏಕೀಕರಣವೇ ಆಗಿತ್ತು. ೧೯೨೦ರಲ್ಲಿ ನಾಗಪುರದಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಭಾರತವನ್ನು ಭಾಷಾವಾರು ಆಧಾರದ ಮೇಲೆ ೨೧ ಭಾಗಗಳನ್ನಾಗಿ ವಿಂಗಡಿಸಲಾಯಿತು. ಅದರಲ್ಲಿ ಕರ್ನಾಟಕವೂ ಇತ್ತು. ಆಗ ರಚನೆಗೊಂಡದ್ದು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ. ಕರ್ನಾಟಕಕ್ಕೆ ಯಾವ ಯಾವ ಪ್ರದೇಶಗಳು ಸೇರಬೇಕು ಎಂಬ ಚರ್ಚೆಯಲ್ಲಿ ಬಳ್ಳಾರಿ ಜಿಲ್ಲೆಯು ಸಮಸ್ಯೆಯನ್ನು ಸೃಷ್ಟಿಸಿತು. ಸಮಸ್ಯೆಯ ನಿವಾರಣೆಗೆ ನೇಮಕಗೊಂಡ ಎಲ್.ಸಿ. ಕೇಳಕರ್ ಸಮಿತಿಯು ಬಳ್ಳಾರಿ ಜಿಲ್ಲೆಯ ಆದವಾನಿ, ಆಲೂರು ಮತ್ತು ರಾಯದುರ್ಗ ತಾಲ್ಲೂಕುಗಳನ್ನು ಆಂಧ್ರಪ್ರಾಂತಿಕ ಸಮಿತಿಗೂ, ಉಳಿದ ಪ್ರದೇಶಗಳನ್ನು ಕರ್ನಾಟಕ ಪ್ರಾಂತಿಕ ಸಮಿತಿಗೂ ಸೇರಿಸುವಂತೆ ಶಿಫಾರಸ್ಸು ಮಾಡಿತು.

೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಮಹಾಧಿವೇಶನದ

ಸಂದರ್ಭದಲ್ಲೇ ಕರ್ನಾಟಕ ಏಕೀಕರಣ ಪರಿಷತ್ತು ತನ್ನ ಮೊದಲ ಸಭೆಯನ್ನು ನಡೆಸಿ, ಕರ್ನಾಟಕಕ್ಕೆ ಸಂಬಂಧಿಸಿದ ಕೆಲವು ಗ್ರಂಥಗಳನ್ನೂ ಬಿಡುಗಡೆ ಮಾಡಿತು. ಆಗ ಹುಯಿಲಗೋಳ ನಾರಾಯಣ ರಾಯರು ಬರೆದಿದ್ದ **'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು'** ಗೀತೆಯನ್ನು ಗಂಗೂಬಾಯಿ ಹಾಡಿದ್ದರು. ೧೯೪೭ರವರೆಗೆ ಕರ್ನಾಟಕ ಏಕೀಕರಣ ಪರಿಷತ್ತಿನ ಹನ್ನೊಂದು ಸಭೆಗಳು ನಡೆದವು. ಧಾರವಾಡ, ಬೆಳಗಾವಿ, ಹುಕ್ಕೇರಿ, ಶೊಲ್ಲಾಪುರ, ಮುಂಬೈ ಮತ್ತು ಕಾಸರಗೋಡುಗಳಲ್ಲಿ ಕರ್ನಾಟಕ ಏಕೀಕರಣ ಪರಿಷತ್ತಿನ ಸಭೆಗಳು ನಡೆದವು. ಹತ್ತನೆಯ ಸಭೆ ನಡೆದದ್ದು ಮುಂಬೈಯಲ್ಲಿ. ಆಗ ಅಧ್ಯಕ್ಷತೆ ವಹಿಸಿದ್ದವರು ಮುಂಬಯಿ ಆಧಿಪತ್ಯದ ಮುಖ್ಯಮಂತ್ರಿ ಜಿ.ಬಿ. ಖೇರ್ ಮತ್ತು ಸಭೆಯ ಉದ್ಘಾಟನೆ ಮಾಡಿದವರು ಸರದಾರ್ ವಲ್ಲಭ ಭಾಯಿ ಪಟೇಲ್. ಇಬ್ಬರೂ ಕರ್ನಾಟಕ ಏಕೀಕರಣದ ಪರವಾಗಿಯೇ ಇದ್ದರು.

ಕರ್ನಾಟಕ ಏಕೀಕರಣ ಪರಿಷತ್ತು ಕರ್ನಾಟಕ ಏಕೀಕರಣಕ್ಕಾಗಿ ನಿರಂತರ ಹೋರಾಟ ನಡೆಸುತ್ತಿದ್ದರೂ ಮುಂಬಯಿ ಮತ್ತು ಮದ್ರಾಸ್ ವಿಧಾನ ಸಭೆಗಳಲ್ಲಿ ಕರ್ನಾಟಕ ಏಕೀಕರಣದ ವಿಚಾರದಲ್ಲಿ ಚರ್ಚೆಗಳು ನಡೆದು, ಗೊತ್ತುವಳಿಗಳ ಸ್ವೀಕಾರ ಆಗುತ್ತಿದ್ದರೂ, ಸರ್ಕಾರವೇ ಕರ್ನಾಟಕ ಏಕೀಕರಣಕ್ಕೆ ತಡೆಯಾಗುತ್ತಿದೆ ಎಂಬ ಅನುಮಾನಗಳು ಬಹಳ ನಾಯಕರಿಗಿತ್ತು. ಸಂಸ್ಥಾನಿಕರು, ವಿಶೇಷವಾಗಿ ಮೈಸೂರು ಸಂಸ್ಥಾನದ ರಾಜರು ಕರ್ನಾಟಕ ಏಕೀಕರಣದ ಪರವಾಗಿಲ್ಲ ಎಂಬ ಕಾರಣವನ್ನು ಸರ್ಕಾರ ಮತ್ತು ಕೆಲವು ಹಿರಿಯ ನಾಯಕರು ಮುಂದಿಡುತ್ತಿದ್ದ ಸಂದರ್ಭದಲ್ಲಿ ಆಗ ಅಸ್ತಿತ್ವದಲ್ಲಿದ್ದ ಬಹುತೇಕ ಎಲ್ಲ ಪ್ರಮುಖ ರಾಜಕೀಯ ಪಕ್ಷಗಳ ಹಿರಿಯರೂ ಸೇರಿ ೧೯೪೭ರ ಆಗಸ್ಟ್ ೩೧ರಂದು ದಾವಣಗೆರೆಯಲ್ಲಿ ಕರ್ನಾಟಕಸ್ಥರ ಮಹಾಸಭೆಯನ್ನು ನಡೆಸಿದರು. ಸಭೆಯ ಅಧ್ಯಕ್ಷತೆ ವಹಿಸಿದ್ದವರು ಎಂ.ಪಿ. ಪಾಟೀಲ. ಅವರು ಮುಂಬಯಿ ಅಧಿಪತ್ಯದಲ್ಲಿ ಕೃಷಿ ಮಂತ್ರಿ ಆಗಿದ್ದರು. ಸಭೆಯನ್ನು ಉದ್ಘಾಟಿಸಿದವರು ಆಗ ಮದ್ರಾಸ್ ಅಧಿಪತ್ಯದಲ್ಲಿ ಕಂದಾಯ ಮಂತ್ರಿ ಆಗಿದ್ದ ಕೆ.ಆರ್. ಕಾರಂತ. ಆ ಅಧಿವೇಶನದ ಪ್ರಮುಖ ಅಂಶವೆಂದರೆ ಮೈಸೂರು ಸಂಸ್ಥಾನದಿಂದ ಭಾಗವಹಿಸಿದ್ದ ಕೆಂಗಲ್ ಹನುಮಂತಯ್ಯ ಮತ್ತು ಬಿ. ಬಸವಲಿಂಗಪ್ಪ ಅವರು ತೆಗೆದುಕೊಂಡ ನಿರ್ಧಾರ. 'ಸಾಧ್ಯವಾದರೆ ಮೈಸೂರನ್ನು ಒಳಗೊಂಡು, ಅಗತ್ಯವಾದರೆ ಅದನ್ನು ಬಿಟ್ಟು ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕು' ಎಂಬ ಬಳ್ಳಾರಿಯ ಕೋ. ಚೆನ್ನಬಸಪ್ಪ ಅವರ ನಿರ್ಣಯಕ್ಕೆ ಹನುಮಂತಯ್ಯ ಮತ್ತು ಬಸವಲಿಂಗಪ್ಪ ಅವರು ಶ್ರೀರಂಗರ ನೆರವಿನಿಂದ 'ಮೈಸೂರನ್ನು ಒಳಗೊಂಡು ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕು' ಎಂದು ತಿದ್ದುಪಡಿ ತಂದರು. ಆ ಗೊತ್ತುವಳಿಯನ್ನು ಸ್ವೀಕರಿಸಲಾಯಿತು. ಕರ್ನಾಟಕ ಏಕೀಕರಣದ ವಿಷಯದಲ್ಲಿ ಅಗತ್ಯವಾದ ಎಲ್ಲ ಕ್ರಮಗಳನ್ನೂ ಕೈಗೊಳ್ಳಲು ಅನುಕೂಲವಾಗುವಂತೆ ಎಂ.ಪಿ. ಪಾಟೀಲ, ಎಸ್. ನಿಜಲಿಂಗಪ್ಪ, ಕೆ.ಬಿ. ಜಿನರಾಜ ಹೆಗಡೆ ಅವರನ್ನು ಒಳಗೊಂಡ ಸಮಿತಿ ನೇಮಕ ಆಯಿತು. ೧೯೪೭ರ ಏಪ್ರಿಲ್ ೧೧ರಂದು ಮುಂಬಯಿ ವಿಧಾನ ಸಭೆ ಮತ್ತು ಏಪ್ರಿಲ್ ೨೨ರಂದು ಮದ್ರಾಸ್ ವಿಧಾನಸಭೆಗಳು ಕರ್ನಾಟಕ ಏಕೀಕರಣದ ವಿಚಾರದಲ್ಲಿ ಗೊತ್ತುವಳಿ ಸ್ವೀಕರಿಸಿದವು. ಅದೇ ವರ್ಷದ ಆಗಸ್ಟ್ ೧೧ರಂದು ಮೈಸೂರು ಒಡೆಯರೂ ತಾವು ಭಾರತ ಒಕ್ಕೂಟದಲ್ಲಿ ಸೇರುವ ನಿರ್ಣಯ ಮಾಡಿದರು.

ಭಾರತದ ಘಟನಾ ಸಮಿತಿಯು ಭಾಷಾವಾರು ಪ್ರಾಂತ ರಚನೆಗೆ ಸಂಬಂಧಿಸಿದಂತೆ ವರದಿ ನೀಡಲು ೧೭-೬-೧೯೪೮ರಂದು ಎಸ್.ಕೆ. ಧರ್ ಆಯೋಗವನ್ನು ನೇಮಿಸಿತು. ೧೯೪೮ರ ಡಿಸೆಂಬರ್ ೧೦ರಂದು ಧರ್ ಆಯೋಗವು ತನ್ನ ವರದಿಯನ್ನು ಘಟನಾ ಸಮಿತಿಗೆ ಸಲ್ಲಿಸಿತು. ಭಾಷಾವಾರು ಪ್ರಾಂತ ರಚನೆಗೆ ಧರ್ ಆಯೋಗವು ಅಸಮ್ಮತಿ ಸೂಚಿಸಿತು. ಧರ್ ಆಯೋಗದ ವರದಿಯನ್ನು ಪರಿಶೀಲಿಸಿ ವರದಿ ಮಾಡಲು ನೇಮಕಗೊಂಡ ತ್ರಿಮೂರ್ತಿ ಅಥವಾ ಬಿ.ವಿ.ಪಿ. (ಜಹಹರಲಾಲ್ ನೆಹರೂ, ವಲ್ಲಭಬಾಯಿ ಪಟೇಲ್, ಪಟ್ಟಾಭಿರಾಮಯ್ಯ) ಸಮಿತಿಯು ಧರ್ ಆಯೋಗದ ನಿರ್ಣಯಗಳನ್ನು ಎತ್ತಿಹಿಡಿಯಿತು. ಈ ಬಗ್ಗೆ ಕಾಂಗ್ರೆಸ್ ಪಕ್ಷದಲ್ಲೇ ಭಿನ್ನಾಭಿಪ್ರಾಯಗಳಿದ್ದವು. ೨೮-೭-೧೯೪೯ರಂದು ಹಾಸನದಲ್ಲಿ ನಡೆದ ಕರ್ನಾಟಕ ಯುವ ಸಮ್ಮೇಳನ ಮತ್ತು ೬-೧-೧೯೪೯ರಂದು ಅರಸೀಕೆರೆಯಲ್ಲಿ ನಡೆದ ಸರ್ವ ಪಕ್ಷಗಳ ಸಭೆಗಳು ಕರ್ನಾಟಕ ಏಕೀಕರಣಕ್ಕಾಗಿ ಘಟನಾ ಸಮಿತಿಯನ್ನು ಒತ್ತಾಯಿಸಿದವು. ಮೈಸೂರು ಸಂಸ್ಥಾನವು ಕರ್ನಾಟಕದಲ್ಲಿ ವಿಲೀನಗೊಳ್ಳುವ ವಿಚಾರದಲ್ಲಿ ಅನುಮಾನಗಳಿದ್ದ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಕರ್ನಾಟಕ ಪ್ರಾಂತ ರಚನಾ ಸಮ್ಮೇಳನವು ಮೈಸೂರು ಸಂಸ್ಥಾನವನ್ನೊಳಗೊಂಡ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣಕ್ಕೆ ಒತ್ತಾಯಿಸಿತು.



ಆಂಧ್ರದಲ್ಲಿ ಪೊಟ್ಟಿ ಶ್ರೀರಾಮುಲು ಅವರು ಆಂಧ್ರ ಪ್ರಾಂತ್ಯ ರಚನೆಗಾಗಿ ಅಮರಣಾಂತ ಉಪವಾಸ ಮಾಡಿ ನಿಧನರಾದಾಗ ಇಡೀ ಆಂಧ್ರ ಪ್ರದೇಶ ಬೆಂಕಿಯ ಕೆಂಡವಾಯಿತು. ಆಗ ನೇಮಕಗೊಂಡ ವಾಂಛೂ ಆಯೋಗವು ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದ ಸಮಸ್ಯೆಯನ್ನು ದೊಡ್ಡದು ಮಾಡಿ ಭಾಷಾವಾರು ಪ್ರಾಂತ ರಚನೆಗೆ ಅಡ್ಡಿಯಾಯಿತು.

ಕಾಂಗ್ರೆಸ್ ನಾಯಕರ ವರ್ತನೆಯಿಂದ ಬೇಸತ್ತ ಕರ್ನಾಟಕದ ಜನ ಹುಬ್ಬಳ್ಳಿಯ ಪುರಸಭಾ ಭವನದಲ್ಲಿ ನಡೆಯಲಿದ್ದ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಕಾರ್ಯಕಾರೀ ಸಮಿತಿಯ ಸಭೆಗೆ ಅಡ್ಡಿ ಮಾಡಿ ಪ್ರತಿಭಟಿಸಿತು. ರಾಜಕೀಯ ನಾಯಕರ ರಾಜೀನಾಮೆಗೆ ಒತ್ತಾಯಿಸಿತು. ಅದೇ ಸಂದರ್ಭದಲ್ಲಿ ಕಾಂಗ್ರೆಸ್ ನಾಯಕರಲ್ಲಿ ಒಬ್ಬರಾಗಿದ್ದ ಅದರಗುಂಚಿ ಶಂಕರಗೌಡರು ಅದರಗುಂಚಿನಲ್ಲೇ ಕರ್ನಾಟಕ ಏಕೀಕರಣಕ್ಕೆ ಒತ್ತಾಯಿಸಿ ಅಮರಣಾಂತ ಉಪವಾಸ ಕೈಗೊಂಡಿದ್ದರು.

ಹುಬ್ಬಳ್ಳಿ ಗಲಭೆಯ ನಂತರ ಮಿಶ್ರಾ ಆಯೋಗದ ವರದಿಗಳನ್ನು ಪರಿಶೀಲಿಸಿ ವರದಿ ಸಲ್ಲಿಸಲು ನೇಮಕಗೊಂಡ ಮಿಶ್ರಾ ಆಯೋಗವು ಆಂಧ್ರ ಪ್ರಾಂತ ರಚನೆಗೆ ಒಲವು ತೋರಿತು. ಕರ್ನಾಟಕ ಪ್ರಾಂತ ರಚನೆಯು ನೆನೆಗುದಿಗೇ ಬಿದ್ದಿತ್ತು. ಆಗ ಸರ್ವಪಕ್ಷಗಳ ಮುಖಂಡರು ಸೇರಿ ಸ್ಥಾಪಿಸಿದ ಅಖಂಡ ರಾಜ್ಯ ನಿರ್ಮಾಣ (ಅ.ಕ.ರಾ.ನಿ.) ಪರಿಷತ್ತು ಸುದೀರ್ಘ ಹೋರಾಟ ನಡೆಸಿ ಕರ್ನಾಟಕ ಪ್ರಾಂತ ರಚನೆಗೆ ಹಾದಿಯನ್ನು ಸುಗಮಗೊಳಿಸಿತು. ಕೇಂದ್ರ ಸರ್ಕಾರ ನೇಮಿಸಿದ ರಾಜ್ಯ ಪುನರ್ವಿಂಗಡಣಾ ಆಯೋಗದ ಶಿಫಾರಸ್ಸಿನ ಮೇರೆಗೆ ಕರ್ನಾಟಕ ರಾಜ್ಯವು **'ವಿಶಾಲ ಮೈಸೂರು'** ಎಂಬ ಹೆಸರಿನೊಂದಿಗೆ ೧-೧೧-೧೯೫೬ರಂದು ಅಸ್ತಿತ್ವಕ್ಕೆ ಬಂದಿತು.

ಕರ್ನಾಟಕ ಏಕೀಕರಣದ ಸಂದರ್ಭದಲ್ಲಿ ಸಾಂಸ್ಕೃತಿಕ ಮತ್ತು ರಾಜಕೀಯ ನೆಲೆಗಳು ಧಾರವಾಡ, ಬೆಂಗಳೂರು, ಹುಬ್ಬಳ್ಳಿ, ಅರಸೀಕೆರೆ, ದಾವಣಗೆರೆ, ಕಾಸರಗೋಡು, ಬೆಳಗಾವಿ, ಹಂಪಿ ಇತ್ಯಾದಿ ನಡೆಸಿದ ಹೋರಾಟಗಳು, ಸಭೆ, ಸಮಾರಂಭಗಳು ಕರ್ನಾಟಕ ಏಕೀಕರಣಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿದವು.

(ಕೃಪೆ: ಜ್ಞಾನಪ್ರಕಾಶ)

## ವಿದ್ವಾನ್ ಹರಳೂರು ಶಿವಕುಮಾರ್ ಅವರ 'ದಾಸೋಹ ಭಾಸ್ಕರ' ಕೃತಿಗೆ ಅಡ್ವೈಸರ್ ಸಾಹಿತ್ಯ ಪ್ರಶಸ್ತಿ

ಪದ್ಮಭೂಷಣ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತು ರಚಿಸಿದ 'ದಾಸೋಹ ಭಾಸ್ಕರ' ಕೃತಿಗೆ ಮಂಡ್ಯದಿಂದ ಪ್ರಕಟವಾಗುತ್ತಿರುವ ಅಡ್ವೈಸರ್ ಕನ್ನಡ ಮಾಸಪತ್ರಿಕೆ ಕೊಡಮಾಡುವ ಪುಸ್ತಕ ಪ್ರಶಸ್ತಿಗೆ ಆಯ್ಕೆ ಮಾಡಲಾಗಿದೆ. ಪ್ರಶಸ್ತಿ ೩೦೦೦ ರೂ. ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿದೆ. ಇದೇ ಕೃತಿಗೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ನೀಡುವ 'ಶ್ರೀಮತಿ ವತ್ಸಲಾ ನಂಜುಂಡಯ್ಯ ದತ್ತಿ' ಪ್ರಶಸ್ತಿಗೆ ಆಯ್ಕೆಯಾಗಿದೆ ಎಂದು ತಿಳಿಸಲು ಸಂತೋಷವಾಗುತ್ತದೆ.

ಈಗಾಗಲೇ ಹಲವಾರು ಕೃತಿಗಳನ್ನು ರಚಿಸಿರುವ ಶ್ರೀ ಹರಳೂರು ಶಿವಕುಮಾರ್ ಅವರನ್ನು ಸಿದ್ಧಗಂಗಾ ಈ ಸಂದರ್ಭದಲ್ಲಿ ಅಭಿನಂದಿಸುತ್ತದೆ. ಅವರ ಲೇಖನಿಯಿಂದ ಮತ್ತಷ್ಟು ಕೃತಿಗಳು ಹೊರಬರಲಿ ಎಂದು ಹಾರೈಸುತ್ತದೆ.

**ಕನ್ನಡ ಬಗ್ಗೆಯ ಅಭಿಮಾನ ರಾಷ್ಟ್ರದ ಏಕ್ಯತೆಗೆ ಸೋಪಾನ. ನಮ್ಮ ನಡೆ ಕನ್ನಡ, ನುಡಿ ಕನ್ನಡ. ಕನ್ನಡವೇ ಸತ್ಯ, ಕನ್ನಡವೇ ನಿತ್ಯ. ಕನ್ನಡ ಉಳಿಸಿ, ಕನ್ನಡ ಬೆಳೆಸಿ. ಕನ್ನಡವನೇ ಬಳಸಿ.**

ಕೃತಿ ಪರಿಚಯ

# ಪುರುಷಸೂಕ್ತಕ್ಕೊಂದು ನಿರಂಜನಜಂಗಮಭಾಷ್ಯ

(ಕಳೆದ ಸಂಚಿಕೆಯಿಂದ...)

– ಕೋ.ರಂ. ಬಸವರಾಜು *

**ತ್ರಿಪಾದೂರ್ಧ್ವಉದೈತ್ಪುರುಷಃ । ಪಾದೋಸ್ಯೇಹಾಭವತ್ಪುನಃ ।**
**ತತೋವಿಷ್ವಙ್ವ್ಯಕ್ರಾಮತ್ ಸಾಶನಾನಶನೇ ಅಭಿ ॥ ೪ ॥**

ಟೀ॥ ತ್ರಿಪಾತ್ – ತ್ರಿವಿಧಾಂಶನಾದ, ಪುರುಷಃ – ನಿರಂಜನಜಂಗಮಾಂಶದ ಪರಮಾತ್ಮವು, ಊರ್ಧ್ವೇ –ಸಕಲತತ್ವಾತೀತಾನಾದಿ ಭಕ್ತಹೃದಯದಲ್ಲಿ, ಉದೈತ್ – ಗುಣದೋಷಾತೀತನಾಗಿರ್ದ್ಪಂ, ಅಸ್ಯ – ಈ ನಿರಂಜನಜಂಗಮದ, ಪಾದಃ – ಚ್ಚತುರ್ಥಾಂಶ ಬ್ರಹ್ಮ ವಿಷ್ಣು ರುದ್ರ ಮಹೇಶ್ವರ ಸದಾಶಿವ ರೂಪಾಂತರಾತ್ಮವು, ಇಹ – ಈ ಪಂಚಕೃತ್ಯಾತ್ಮಕ ಬ್ರಹ್ಮಾಂಡದಲ್ಲಿ, ಪುನಃ – ಮರಳಿ, ಅಭವತ್ – ತಾರತಮ್ಯದಿಂ ದೃಷ್ಟಿ ಪ್ರಳಯಸಮೇತಮಪ್ಪುದು, ತತಃ – ಈ ಪಂಚಮೂರ್ತಿತತ್ವದತ್ತಣಿಂ, ಅಭಿ – ಇದಿರ್ಮೊಗನಾಗಿವರ್ತಿಪ ಜೀವಾತ್ಮನು, ಸಾಶನಾನಶನೇ – ಚರಾಚರಪ್ರಪಂಚದಲ್ಲಿ, ವಿಷ್ವಕ್ – ದೇವದಾನವ ಮಾನವ ತಿರ್ಯಗ್ಜಾತಿ ರೂಪನಾಗಿ, ವ್ಯಕ್ರಾಮತ್ – ಮಿಗಿಲಾಗಡಿಯಿಟ್ಟು ಚರಿಸಿದಪಂ ॥ ೪ ॥

**ತಸ್ಮಾದ್ವಿರಾಡಜಾಯತ । ವಿರಾಜೋ ಅಧಿಪುರುಷಃ ।**
**ಸ ಜಾತೋತ್ಯರಿಚ್ಯತ ಪಶ್ಚಾದ್ಭೂಮಿ ರಥೋ ಪುರಃ ॥ ೫ ॥**

ಟೀ॥ ತಸ್ಮಾತ್ – ಆ ನಿರಂಜನನತ್ತಣಿಂದೆ, ವಿರಾಟ್ – ವಿವಿಧಲೀಲಾಮೂರ್ತಿಯಾದ ಮಂತ್ರಗೋಪ್ಯನು, ಅಜಾಯತ–ಪುಟ್ಟಿದನು, ಜನಿ ಪ್ರಾದುರ್ಭಾವೇ (ಜನನದೊಳ್) ಎಂಬ ಧಾತುವಿನ ಮೇಲೆ ಲಜಾತ್ಮನೇಪದದಪ್ರಥಮ ಪುರುಷೈಕವಚನಂ, ವಿರಾಜಃ– ಆ ವಿರಾಟ್ಪುರುಷನದೆಸೆಯಿಂದ, ಪುರುಷಃ–ಸದಾಶಿವನು, ಅಧಿ–ಪುಟ್ಟಿದನು, ಸಃ–ಆ ಸದಾಶಿವನು, ಜಾತಸ್ಸನ್ – ಹುಟ್ಟಿದವನಾಗಿ, ಅತ್ಯರಿಚ್ಯತ – ಮಹೇಶ್ವರ ರುದ್ರ ವಿಷ್ಣು ಬ್ರಹ್ಮಸ್ವರೂಪದಿಂ ಪರಿಣಮಿಸಿದಂ, ಅತಿ ಎಂಬುಪಸರ್ಗಪೂರ್ವಕವಾದ ರಿಚರೇಚನೇ ಎಂಬ ಧಾತುವಿನ ಮೇಲೆ ಲಜಾತ್ಮನೇ ಪದದ ಪ್ರಥಮಪುರುಷೈಕವಚನಂ, ಪಶ್ಚಾತ್–ಮಹೇಶ್ವರ ರುದ್ರ ವಿಷ್ಣು ಬ್ರಹ್ಮರ ಜನನದ, ಅಥೋ–ಆನಂತರದಲ್ಲಿ, ಪುರಃ–ಪ್ರಥಮದಲ್ಲಿ, ಭೂಮಿಃ–ಬ್ರಹ್ಮಾಂಡವಾಯಿತ್ತು.

**ಯತ್ಪುರುಷೇಣ ಹವಿಷಾ ದೇವಾಯಜ್ಞಮತನ್ವತ ।**
**ವಸನ್ತೋಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಶ್ಶರದ್ಧವಿಃ ॥**

ಟೀ॥ ಯತ್–ಯಾವ ನಿರಂಜನಜಂಗಮವಂ ಕುರಿತು, ದೇವಾಃ–ಬ್ರಹ್ಮ ವಿಷ್ಣು ರುದ್ರ ಮಹೇಶ್ವರ ಸದಾಶಿವರು, ಪುರುಷೇಣ – ತಮ್ಮ ತಮ್ಮ ಆತ್ಮನೆಂಬ, ಹವಿಷಾ–ನೇವೇದ್ಯದಿಂದ, ಯಜ್ಞಂ–ಜ್ಞಾನಾಗ್ನಿ ಹೋಮವನ್ನು, ತನ್ವತ–ವಿಸ್ತರಿಸಿದರೋ, ತನು ವಿಸ್ತಾರೇ (ಬಿತ್ತರದೊಳ್) ಎಂಬ ಧಾತುವಿನ ಮೇಲೆ ಲಜಾತ್ಮನೇ ಪದದ ಪ್ರಥಮಪುರುಷ ಬಹುವಚನಂ. ಅಸ್ಯ–ಆ ಹೋಮಕ್ಕೆ, ವಸಂತಃ–ಚೈತ್ರ ವೈಶಾಖ ಯುಗ್ಮನು, ಆಜ್ಯಂ–ತುಪ್ಪವು, ಗ್ರೀಷ್ಮಃ–ಜ್ಯೇಷ್ಠಾಷಾಢವೆಂಬೆರಡು, ಇಧ್ಮಃ–ಸಮಿತ್ತು, ಶರತ್–ಆಶ್ವಯುಜ ಕಾರ್ತೀಕವೆಂಬೆರಡು, ಹವಿಃ–ಚರು, ಆಸೀತ್–ಆಯಿತು, ಅಸ ಭುವಿ(ವಿದ್ಯಮಾನದೊಳ್) ಎಂಬ ಧಾತುವಿನ ಮೇಲೆ ಲುಙ್ಪರಸ್ಮೈಪದದ ಪ್ರಥಮಪುರುಷೈಕವಚನಂ ॥ ೬ ॥

**ಸಪ್ತಾಸ್ಯಾಸನ್ ಪರಿಧಯಃ ತ್ರಿಸ್ಸಪ್ತ ಸಮಿಧಃ ಕೃತಾಃ ।**
**ದೇವಾ ಯದ್ಯಜ್ಞಂ ತನ್ವಾನಾಃ ಅಬಧ್ನನ್ ಪುರುಷಂ ಪಶುಂ ॥ ೭ ॥**

* ನಿವೃತ್ತ ಪ್ರಾಧ್ಯಾಪಕರು, ಶ್ರೀ ಸಿದ್ಧಗಂಗಾ ಸಂಸ್ಕೃತ ಮಹಾವಿದ್ಯಾಲಯ, ಸಿದ್ಧಗಂಗಾ ಮಠ, ತುಮಕೂರು



ಟೀ॥ ಅಸ್ಯ – ಈ ಜ್ಞಾನಾಗ್ನಿಹೋಮಕ್ಕೆ, ಪರಿಧಯಃ–ಮಂಡಲಂಗಳು, ಸಪ್ತ–ಓಂಭೂಃ ಓಂಭುವಃ ಓಂಸುವಃ ಓಂಮಹಃ ಓಂಜನಃ ಓಂ ತಪಃ ಓಂ ಸತ್ಯಂ ಎಂಬೀ ಏಳುವ್ಯಾಹೃತಿಗಳು, ಆಸನ್–ಆದವು, ತ್ರಿಸಪ್ತ–ದ್ವಾದಶಮಾಸಂಗಳು ಷಡೃತುಗಳು ಉತ್ತಮದ ಮಧ್ಯಮದ ಕನಿಷ್ಠದಬಿಸಿಗೆಗಳು ಈ ಇಪ್ಪತ್ತೊಂದು, ಸಮಿಧಃ –ಸಮಿತ್ತುಗಳಾಗಿ, ಕೃತಾಃ–ಮಾಡಲ್ಪಟ್ಟವು, ದೇವಾಃ–ಬ್ರಹ್ಮ ವಿಷ್ಣು, ರುದ್ರ ಮಹೇಶ್ವರ ಸದಾಶಿವರು, ಯತ್–ಆವುದಾನೊಂದು ನಿರಂಜನಜಂಗಮವಂ ಕುರಿತು, ಯಜ್ಞಂ–ಜ್ಞಾನಾಗ್ನಿಹೋಮವಂ, ತನ್ವಾನಾಸ್ಸಂತಃ–ಮಾಡುವರಾಗಿ, ಪಶುಂ–ಜ್ಞಾನಹೀನನಾದ, ಪುರುಷಂ–ಜೀವಾತ್ಮನನ್ನು, ಅಬಧ್ನನ್–ಷಡಕ್ಷರಮಂತ್ರಪಾಶದಿಂ ಬಂಧಿಸಿದರ್ ॥ ೭ ॥

**ತಂ ಯಜ್ಞಂಬರ್ಹಿಷಿ ಪ್ರೋಕ್ಷನ್ ಪುರುಷಂ ಜಾತಮಗ್ರತಃ ।**
**ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥ ೮ ॥**

ಟೀ॥ ತಂ ಯಜ್ಞಂ – ಆ ಜ್ಞಾನಾಗ್ನಿಹೋಮವನ್ನು ಕುರಿತು, ಬರ್ಹಿಷಿ–ಸ್ಥೂಲಸೂಕ್ಷ್ಮ ಕಾರಣತನುತ್ರಯದಲ್ಲಿ, ಅಗ್ರತಃ– ಪ್ರಪಂಚದಿಂ ಮೊದಲಲ್ಲಿ, ಜಾತಂ–ಉತ್ಪನ್ನವಾದ, ಪುರುಷಂ–ಜೀವಾತ್ಮಾಂತರಾತ್ಮವಾಚಕವಾದಿಷ್ಟ ಪ್ರಾಣ ಭಾವಲಿಂಗಮಂ, (ಕಕ್ಷಕರಕಂಠೋತ್ತಮಾಂಗಾಮಳ್ಳೈಕ್ಯಸ್ಥಾನಂಗಳಲ್ಲಿ) ಯೇ– ಆರು, ಸಾಧ್ಯಾಃ –ಪ್ರಪಂಚರಚನಾ ಸಾಧನಯೋಗ್ಯರುಂಟೋ, ಋಷಯಶ್ಚ–ಸದ್ಯೋಜಾತಾದಿಗಳುಂಟೊ, ತೇ ದೇವಾಃ–ಆ ಲೀಲಾಮೂರ್ತಿಗಳು, ಪ್ರೋಕ್ಷನ್–ಧರಿಸಿದರ್, ಪ್ರ ಎಂಬುಪಸರ್ಗವೇ ಪೂರ್ವದಲ್ಲುಳ್ಳ–ಉಕ್ಷ ಸೇಚನೇ ಎಂಬ ಧಾತುವಿನ ಮೇಲೆ ಲಙ್ಪರಸ್ಮೈಪದದ ಪ್ರಥಮಪುರುಷದ ಬಹುವಚನಂ. ತೇನ–ಆ ನಿಮಿತ್ತದಿಂ, ಸ್ವಾಧಾರಕ್ಷೇತ್ರಜ್ಞನಿಂ, ಆಯಜಂತ–ಬಾಹ್ಯಾಭ್ಯಂತರಯಜನಮಂ ಮಾಡಿದರ್, ಯಜ ದೇವಪೂಜಾ ಸಂಗತಿ ಕರಣದಾನೇಷು. ಈ ಅರ್ಥಂಗಳಲ್ಲಿ ವರ್ತಿಪ ಧಾತುವಿನ ಲಜಾತ್ಮನೇಪದದ ಪ್ರಥಮ ಪುರುಷ ಬಹುವಚನಂ ॥ ೮ ॥

**ತಸ್ಮ್ಯಾದ್ಯಜ್ಞಾತ್ಸರ್ವಹುತಃ ಸಂಭೃತಂ ವೃಷದಾಜಂ ।**
**ಪಶೂಗ್‌ಸ್ತಾಗ್‌ಶ್ಚಕ್ರೇ ವಾಯವ್ಯಾನ್ ಆರಣ್ಯಾನ್ ಗ್ರಾಮ್ಯಾಶ್ಚ ಯೇ ॥ ೯ ॥**

ಟೀ॥ ಸರ್ವಹುತಃ – ಸರ್ವಪ್ರಪಂಚಲಯಗಮನಕಾರಣವಾದ, ತಸ್ಮಾತ್–ಯಜ್ಞಾತ್ – ಆ ನಿರಂಜನ ಜಂಗಮಲಿಂಗಾರಾಧನದತ್ತಣಿಂ, ಪೃಷದಾಜ್ಯಂ – ಧಧಿ ಘೃತೋಪಲಕ್ಷಿತಪ್ರಾಣಿಭೋಗ್ಯವಸ್ತು, ಸಂಭೃತಂ – ಸಂಪಾದಿಸಲ್ಪಟ್ಟುದು, ಯೇ–ಆವ, ಗ್ರಾಮ್ಯಾಃ– ಯೋನಿಜಪ್ರಾಣಿಗಳುಂಟೊ, ವಾಯವ್ಯಾನ್ – ಪ್ರಾಣವಾಯುಪ್ರಭೃತಿಯೇ ಪ್ರಧಾನವಾಗುಳ್ಳ, ಆರಣ್ಯಾನ್ – ಭವಾರಣ್ಯವೇ ಮುಖ್ಯವಾಗುಳ್ಳ, ತಾನ್ – ಆ, ಪಶೂನ್– ಮಾಯಾಪಾಶ ಬದ್ಧಂಗಳಾದ ಜೀವಂಗಳಂ, ಚಕ್ರೇ – ಪಂಚಮೂರ್ತಿಗಳು ಪಂಚಕೃತ್ಯಕ್ಕೊಳಗು ಮಾಡಿದರ್ ॥ ೯ ॥

**ತಸ್ಮಾದ್ಯಜ್ಞಾತ್ಸರ್ವಹುತಃ ಋಚಸ್ಸಾಮಾನಿ ಜಜ್ಞಿರೇ**
**ಛಂದಾಗ್‌ಂಸಿ ಜಜ್ಞಿರೇ ತಸ್ಮಾತ್ ಯಜುಸ್ತಸ್ಮಾದಜಾಯತ ॥ ೧೦ ॥**

ಟೀ॥ ಸರ್ವಹುತಃ – ಸಮಸ್ತ ಪ್ರಪಂಚಲಯಗಮನಕಾರಣವಾದ, ತಸ್ಮಾತ್ – ಆ, ಯಜ್ಞಾತ್–ನಿರಂಜನಜಂಗಮ ಲಿಂಗಾಕಾರಾಧನದತ್ತಣಿಂ, ಋಚಃ–ಶಿಕ್ಷಾ ಕಲ್ಪ ವ್ಯಾಕರಣ ಜ್ಯೋತಿಶ್ಛಂದೋ ನಿಘಂತುಗಳಿಂಕೂಡಿದ ಋಗ್ವೇದಂಗಳ್, ಸಾಮಾನಿ– ತತ ವಿತತ ಘನ ಸುಷಿರಮಯ ಸಾಮವೇದಂಗಳುಂ, ಜಜ್ಞಿರೇ – ಹುಟ್ಟಿದವು, ಜನಿ ಪ್ರಾದುರ್ಭಾವೇ (ಜನನದೊಳ್) ಎಂಬ ಧಾತುವಿನ ಮೇಲೆ ಲಿಡಾತ್ಮನೇಪದದ ಪ್ರಥಮ ಪುರುಷ ಬಹುವಚನಂ. ತಸ್ಮಾತ್ – ಆ ನಿರಂಜನಜಂಗಮ ಲಿಂಗಾರಾಧನದತ್ತಣಿಂ, ಛಂದಾಗ್‌ಂಸಿ–ಷಟ್ಕರ್ಮಸಾಧನ ಮಂತ್ರಾದ್ಯಾಥರ್ವಣಂಗಳುಂ ಕ್ರಿಯಾ ಚರ್ಯಾ ಯೋಗ ಜ್ಞಾನಾತ್ಮಕ ಕಾಮಿಕಾದಿವಾತುಳಾಂ ತತಂತ್ರಂಗಳುಂ, ಜಜ್ಞರೇ – ಹುಟ್ಟಿದವು, ತಸ್ಮಾತ್ – ಆ ನಿರಂಜನಜಂಗಮ ಲಿಂಗಾರಾಧನದತ್ತಣಿಂ, ಯಜುಃ–ಪೂಜಾ ಮಂತ್ರಾಢ್ಯದ ಯಜುರ್ವೇದವಂ, ಅಜಾಯತ–ಹುಟ್ಟಿತು, ಜನಿ ಪ್ರಾದುರ್ಭಾವೇ ಎಂಬ ಧಾತುವಿನ ಲಜಾತ್ಮನೇಪದದ ಪ್ರಥಮ ಪುರುಷೈಕವಚನಂ ॥ ೧೦ ॥

(ಮುಂದುವರೆಯುವುದು)

ಶರಣಾಂಜಲಿ

## ಗುಲ್ಬರ್ಗ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿ ಡಾ. ಎನ್. ರುದ್ರಯ್ಯ ವಿಧಿವಶ

ಗುಲ್ಬರ್ಗ ವಿಶ್ವವಿದ್ಯಾನಿಲಯದ ನಿವೃತ್ತ ಕುಲಪತಿ ಹಾಗೂ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಗೌರ್ನಿಂಗ್ ಕೌನ್ಸಿಲ್ ನಿವೃತ್ತ ಛೇರ್ಮೆನ್ ಡಾ. ಎನ್. ರುದ್ರಯ್ಯ ಅವರು ಸೆಪ್ಟೆಂಬರ್ ೧೮ ರಂದು ಮೈಸೂರಿನಲ್ಲಿ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೮೭ ವರ್ಷವಾಗಿತ್ತು.

ತುಮಕೂರು ತಾಲ್ಲೂಕು ಬೆಳ್ಳಾವಿಯಲ್ಲಿ ೧೯೩೧ರಲ್ಲಿ ಶರಣ ದಂಪತಿಗಳಾದ ನಂಜುಂಡಪ್ಪ ಮತ್ತು ಶ್ರೀಮತಿ ಪುಟ್ಟರುದ್ರಮ್ಮ ಅವರ ಪುತ್ರರಾಗಿ ಜನಿಸಿದ ಡಾ. ರುದ್ರಯ್ಯನವರು ಹುಟ್ಟಿದೂರಿನಲ್ಲಿ ಪ್ರಾಥಮಿಕ ಶಿಕ್ಷಣ, ತುಮಕೂರಿನಲ್ಲಿ ಪ್ರೌಢಶಾಲೆ ಶಿಕ್ಷಣ ಪಡೆದು, ಮೈಸೂರು ವಿಶ್ವವಿದ್ಯಾಲಯದಲ್ಲಿ ಬಿ.ಎಸ್ಸಿ. ಆನರ್ಸ್, ಎಂ.ಎಸ್ಸಿ ಹಾಗೂ ಟೊರೆಂಟೊ ವಿಶ್ವವಿದ್ಯಾಲಯದಲ್ಲಿ ಅಪ್ಲೈಡ್ ಮ್ಯಾಥಮೆಟಿಕ್ಸ್‌ನಲ್ಲಿ ಎಂ.ಎ. ಪದವಿ, ಕೆನಡಾದ ವೆಸ್ಟರ್ನ್ ಒಂಟಾರಿಯೊ ವಿಶ್ವವಿದ್ಯಾಲಯದಲ್ಲಿ ಪಿ.ಹೆಚ್.ಡಿ ಪದವಿ ಪಡೆದ ಪ್ರತಿಭಾವಂತರಾಗಿದ್ದರು. ಮೈಸೂರು ವಿಶ್ವವಿದ್ಯಾಲಯದ ಸೆಂಟ್ರಲ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ವೃತ್ತಿಜೀವನ ಪ್ರಾರಂಭಿಸಿದ ಡಾ. ರುದ್ರಯ್ಯನವರು ವಿವಿಧ ಕಾಲೇಜುಗಳಲ್ಲಿ ಸೇವೆ ಸಲ್ಲಿಸಿದ್ದರು. ವೃತ್ತಿಯಿಂದ ನಿವೃತ್ತರಾದ ನಂತರವೂ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಗೌರವ ಪ್ರಾಧ್ಯಾಪಕರಾಗಿಯೂ ಸೇವೆ ಸಲ್ಲಿಸಿದ್ದರು. ಅನೇಕ ವಿದ್ಯಾರ್ಥಿಗಳಿಗೆ ಪಿ.ಹೆಚ್‌ಡಿ ಮಾರ್ಗದರ್ಶಕರಾಗಿದ್ದರು.

ಶ್ರೀ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಲ್ಲಿ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಪರಮಪೂಜ್ಯರ ಗುರುವಂದನಾ ಸಮಾರಂಭದಲ್ಲಿ ಇವರು ಶಿಕ್ಷಣ ಕ್ಷೇತ್ರದಲ್ಲಿ ಮಾಡಿದ ಅನುಪಮ ಸೇವೆಗಾಗಿ ಪರಮಪೂಜ್ಯ ಶ್ರೀಗಳು ಸನ್ಮಾನಿಸಿ ಆಶೀರ್ವದಿಸಿದ್ದನ್ನೂ ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು. ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಗತಿಗೆ ಇವರ ಸೇವೆ ಸಂದಿದೆ.

### ಪ್ರಶಸ್ತಿ ಪುರಸ್ಕಾರಗಳು

ಡಾ. ಎನ್. ರುದ್ರಯ್ಯನವರು ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿದ ಅದ್ವಿತೀಯ ಸೇವೆಗಾಗಿ ಕರ್ನಾಟಕ ಸರ್ಕಾರದಿಂದ ರಾಜ್ಯೋತ್ಸವ ಪ್ರಶಸ್ತಿ, ಸರ್. ಎಂ. ವಿಶ್ವೇಶ್ವರಯ್ಯ ಪ್ರಶಸ್ತಿ, ಶೈಕ್ಷಣಿಕ ಕ್ಷೇತ್ರದ ಸಾಧನೆಗಾಗಿ ಇಂಗ್ಲೆಂಡಿನ ಪ್ರತಿಷ್ಠಿತ 'ಪ್ಲೆಟೋ ಅವಾರ್ಡ್'ಗೆ ಭಾಜನರಾಗಿದ್ದರು.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

ಕೇರಳದಲ್ಲಿ ಮಲಯಾಳಿಯಂತೆ, ಆಂಧ್ರದಲ್ಲಿ ತೆಲುಗಿನಂತೆ,
ತಮಿಳುನಾಡಿನಲ್ಲಿ ತಮಿಳಿನಂತೆ, ಕರ್ನಾಟಕದಲ್ಲಿ ಕನ್ನಡ
ಪ್ರಥಮ ಭಾಷೆಯಾಗದಿದ್ದರೆ,
ಕನ್ನಡವೇ ಶಿಕ್ಷಣ ಮಾಧ್ಯಮವಾಗದಿದ್ದರೆ,
ಕನ್ನಡಿಗರ ಬಾಳು ಕುಂಠಿತವಾಗುತ್ತದೆ.

– ಕುವೆಂಪು



# ಅಭೂತಪೂರ್ವವಾಗಿ ನಡೆದ ಪಂಡಿತ ಚೆನ್ನಪ್ಪ ಎರೇಸೀಮೆಯವರ ಜನ್ಮಶತಮಾನೋತ್ಸವ ಸಮಾರಂಭ

ವರದಿ: ಎಚ್.ಎಸ್. ಸಿದ್ಧಗಂಗಪ್ಪ *

ಒಮ್ಮೆ ಸಾಕ್ರೆಟಿಸ್ ಶಿಷ್ಯರನ್ನು ಕೇಳಿದ. ಜೀವನದ ಸಾರ್ಥಕ ಯಾವುದರಲ್ಲಿದೆ? ಶಿಷ್ಯರೆಲ್ಲ ತಮಗೆ ತೋರಿದ ಉತ್ತರಗಳನ್ನು ನೀಡಿದರು. ಗುರುವಿಗೆ ಯಾವುದೂ ಸಮರ್ಪಕವೆನ್ನಿಸಲಿಲ್ಲ. ಆತ ಹೇಳಿದ 'ಜೀವನದ ಸಾರ್ಥಕ ಬದುಕಿನಲ್ಲಿಲ್ಲ. ಬದುಕಿನಾಚೆ ಇದೆ. ಸತ್ತ ಮೇಲೆ ಎಷ್ಟು ಜನರ ಹೃದಯಗಳಲ್ಲಿ ನಿಮ್ಮ ನೆನಪು ಹಸಿರಾಗಿರುತ್ತದೆಯೋ; ಎಷ್ಟು ಜನ ನಿಮ್ಮನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆಯೋ ಅದರಲ್ಲಿದೆ. ಆ ಸ್ಮರಣೆ ಬರುವುದು ನೀವು ಬದುಕಿದ ಮೌಲ್ಯಗಳಿಂದ. ಬದುಕಿನಲ್ಲಿ ಘನತೆಯನ್ನು ನೀಡುವುದರೊಂದಿಗೆ ಸಾವಿನಲ್ಲಿಯೂ ಘನತೆ ತರುತ್ತದೆ. ಹಾಗೆ ಬದುಕಿ ಮರೆಯಾದ ಪಂಡಿತ ಚೆನ್ನಪ್ಪ ಎರೇಸೀಮೆಯವರು ಜನರ ಮನಸ್ಸಿನಲ್ಲಿ ಹಚ್ಚಹಸಿರಾಗಿ ಉಳಿದಿದ್ದಾರೆಂಬುದಕ್ಕೆ ಅಕ್ಟೋಬರ್ ೧೨, ೨೦೧೮ ರಂದು ರವೀಂದ್ರ ಕಲಾಕ್ಷೇತ್ರದಲ್ಲಿ ನಡೆದ ಜನ್ಮಶತಮಾನೋತ್ಸವ ಸಮಾರಂಭದಲ್ಲಿ ಕಿಕ್ಕಿರಿದು ತುಂಬಿದ್ದ ಜನಸ್ತೋಮವೇ ಸಾಕ್ಷಿಯಾಗಿತ್ತು. ಒಬ್ಬ ವ್ಯಕ್ತಿಯ ಬದುಕಿನಲ್ಲಿ ಇದಕ್ಕಿಂತಲೂ ಮತ್ತೇನು ಬೇಕು! ಪಂಡಿತ ಚೆನ್ನಪ್ಪ ಎರೇಸೀಮೆಯವರು ಶಿಕ್ಷಣ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಅವರು ಮಾಡಿದ ಸಾಧನೆ ಅಮೂಲ್ಯವಾದುದು. ಬಹುಕಾಲ ಉಳಿಯುವಂತಹದು !

ವೇದಿಕೆಯಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು

ಸಮಾರಂಭ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಅರ್ಥಪೂರ್ಣವಾಗಿ ನಡೆಯಿತು.

ಪಂಡಿತ ಚೆನ್ನಪ್ಪ ಎರೇಸೀಮೆ ವಿರಚಿತ **'ಉದ್ದಾನೇಶ ಚರಿತೆ'** ಮರುಮುದ್ರಣ ಕೃತಿಯನ್ನು ಲೋಕಾರ್ಪಣೆ ಮಾಡಿದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ಪಂ. ಚೆನ್ನಪ್ಪ ಎರೇಸೀಮೆಯವರಂಥ ಘನ ವಿದ್ವಾಂಸರನ್ನು ಈ ನಾಡಿಗೆ ಕೊಟ್ಟ ಅವರ ತಂದೆ ತಾಯಿಗಳವರು ಪುಣ್ಯಾತ್ಮರು. ಪಂಡಿತ ಚೆನ್ನಪ್ಪ ಎರೇಸೀಮೆಯವರಿಗೂ, ಸಿದ್ಧಗಂಗಾ ಮಠಕ್ಕೂ, ಪರಮಪೂಜ್ಯ ಗುರುದೇವರಿಗೂ ಅವಿನಾಭಾವ ಸಂಬಂಧವಿತ್ತು. ಅವರು ಶ್ರೀಮಠಕ್ಕೆ ಮಾಡಿದ ಸೇವೆ ಮಹತ್ತರವಾದುದು. ಪೂಜ್ಯ ಶ್ರೀಗಳವರು ಗ್ರಾಮಾಂತರ ಪ್ರದೇಶಗಳಿಗೆ ಹೋಗುವಾಗ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೭೫೮೬೧

ಜತೆಯಲ್ಲಿ ಎರೇಸೀಮೆಯವರನ್ನೂ ಕರೆದುಕೊಂಡು ಹೋಗಿ ಕೀರ್ತನೆ ಮಾಡಿಸುತ್ತಿದ್ದರು. ಅವರು ಸಮರ್ಥ ಗುರುವಿನ ಸಮರ್ಥ ಶಿಷ್ಯರಾಗಿದ್ದರು. ಅವರ ಸೇವೆ ಶ್ರೀ ಮಠಕ್ಕೆ ಸಂದಿರುವಂತೆ ಕರ್ನಾಟಕಕ್ಕೂ ಸಂದಿದೆ. ಕನ್ನಡ ನಾಡಿನ ಭಾಗವಾಗಿದ್ದರು ಎರೇಸೀಮೆಯವರು" ಎಂದು ತಿಳಿಸಿದ ಪೂಜ್ಯ ಶ್ರೀಗಳವರು "ವ್ಯಕ್ತಿ ಅಳಿದರೂ ಅವರ ಕೃತಿಗಳು ಸದಾಕಾಲ ಇರುತ್ತವೆ. ಕನ್ನಡ ಇರುವವರಿಗೂ ಅವರ ಹೆಸರು ಶಾಶ್ವತವಾಗಿರುತ್ತದೆ. "ಅವರು ನಂದಾದೀಪದಂತೆ ಸದಾ ಬೆಳಗುವ ಜ್ಯೋತಿಯಾಗಿ ಬೆಳಗುತ್ತಿದ್ದಾರೆ. ಪರಮಪೂಜ್ಯರ ಜೀವನವನ್ನು ಭಾಮಿನಿ ಷಟ್ಪದಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಅತ್ಯಂತ ಪವಿತ್ರವಾದ ವೃತ್ತಿ ಶಿಕ್ಷಕ ವೃತ್ತಿ. ಅಂತಹ ಪವಿತ್ರವಾದ ಶಿಕ್ಷಕ ವೃತ್ತಿಗೆ ಘನತೆ ಗೌರವವನ್ನು ತಂದುಕೊಟ್ಟು ಶಿಕ್ಷಕ ಸಮುದಾಯಕ್ಕೆ ಮಾದರಿಯಾಗಿದ್ದಾರೆ, ಸ್ಫೂರ್ತಿಯಾಗಿದ್ದಾರೆ. ಇದೊಂದು ಅಭಿಮಾನಪಡುವಂತ ಅಭಿನಂದನಾ ಸಮಾರಂಭ. ಅವರು ಪೂರ್ಣ ಬದುಕನ್ನು ಸಮಾಜಕ್ಕೆ ಕೊಟ್ಟಿದ್ದಾರೆ. ಚೆನ್ನಪ್ಪ ಎರೇಸೀಮೆಯವರ ಯಶಸ್ಸು ಅವರ ತಂದೆ ತಾಯಿಗಳವರ ಜತೆಗೆ ಅವರ ಧರ್ಮಪತ್ನಿ ಶ್ರೀಮತಿ ಪಾರ್ವತಮ್ಮನವರಿಗೂ ಸಲ್ಲಬೇಕು" ಎಂದು ಹೇಳಿದರು.

ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಚನ

ಹಿರಿಯ ವಿದ್ವಾಂಸರೂ, ಖ್ಯಾತ ಸಂಶೋಧಕರೂ ಆದ ಡಾ. ಎಂ. ಚಿದಾನಂದಮೂರ್ತಿಯವರು ಮಾತನಾಡಿ "ಪಂಡಿತ ಚೆನ್ನಪ್ಪ ಎರೇಸೀಮೆಯವರು ನಂದಾದೀವಿಗೆಯಂತಿದ್ದರು. ನಂದಾದೀಪದ ಪಾವಿತ್ರ್ಯತೆ ವಿದ್ಯುತ್ ದೀಪಗಳಿಗಿಲ್ಲ. ಅವರ ನೆನಪು ನಮಗೆ ಸುಖ, ಸಮೃದ್ಧಿಯನ್ನು ಕೊಡುತ್ತದೆ. ಅವರಲ್ಲಿ ಒಬ್ಬ ಶ್ರೇಷ್ಠ ಸಂಶೋಧಕ ಹಾಗೂ ಕವಿ ಹೃದಯ ಸಂಗಮಿಸಿತ್ತು. ಸಿದ್ಧಗಂಗಾ ಮಠದ ಭಕ್ತರಾಗಿ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅಂತರಂಗದ ಶಿಷ್ಯರಾಗಿ, ಆತ್ಮೀಯರಾಗಿದ್ದರು. ಅವರು ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಗಾಗಿ ವಿಶ್ವವಿದ್ಯಾಲಯಗಳು ಗೌರವ ಡಿ.ಲಿಟ್ ಪದವಿ ಕೊಡಬೇಕು" ಎಂದು ಹೇಳಿದರು.

ಡಾ. ಎಂ. ಚಿದಾನಂದಮೂರ್ತಿಯವರಿಂದ ನುಡಿ ಗೌರವ

ಪಂಡಿತ ಚೆನ್ನಪ್ಪ ಎರೇಸೀಮೆಯವರ ಆತ್ಮಚರಿತೆ 'ನನ್ನಕಥೆ' ಪರಿಷ್ಕೃತ ಆವೃತ್ತಿ ಲೋಕಾರ್ಪಣೆ ಮಾಡಿದ ಹಿರಿಯ ಜಾನಪದ ವಿದ್ವಾಂಸರು, ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ವಿಶ್ರಾಂತ ಅಧ್ಯಕ್ಷರೂ

ಕಿಕ್ಕಿರಿದು ತುಂಬಿದ್ದ ಅಭಿಮಾನಿಗಳು



ಆದ ಡಾ. ಗೊ.ರು. ಚನ್ನಬಸಪ್ಪ ಅವರು ಮಾತನಾಡಿ "ಎರೇಸೀಮೆಯವರು ಸರ್ಕಾರಿ ಸೇವೆಯಿಂದ ನಿವೃತ್ತರಾದ ನಂತರ ಮೂವತ್ತು ವರ್ಷ ಬದುಕಿದ್ದರು. ಆ ಮೂವತ್ತು ವರ್ಷಗಳನ್ನು ಸಾಹಿತ್ಯ ಕೃಷಿಯಲ್ಲಿ ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರು. ಜೀವನದುದ್ದಕ್ಕೂ ನೋವು-ನಲಿವನ್ನು ಕಂಡು, ಎಲ್ಲವನ್ನು ಸಮಚಿತ್ತದಿಂದ ಸ್ವೀಕರಿಸಿದರು. ಎರೇಸೀಮೆಯವರ ಜೀವನ ಕಥೆಯಂತೆ ನನ್ನ ಕಥೆಯೂ ಆಗಿದೆ. ನಾವಿಬ್ಬರೂ ಒಂದೇ ದೋಣಿಯಲ್ಲಿ ಸಾಗಿ ಬಂದವರು ಎಂದು ಅವರೊಂದಿಗಿನ ಒಡನಾಟವನ್ನು ಸ್ಮರಿಸಿಕೊಂಡರು.

ಡಾ. ಗೊ.ರು. ಚನ್ನಬಸಪ್ಪನವರಿಂದ 'ನನ್ನ ಕಥೆ' ಕೃತಿಪರಿಚಯ

'ನನ್ನಕಥೆ' ಕೃತಿಯುದ್ದಕ್ಕೂ ಕಥಾನಿರೂಪಣಾ ಶೈಲಿ ಓದುಗರನ್ನು ಸೆರೆಹಿಡಿಯುತ್ತದೆ. ಹಳ್ಳಿಯ ಸೊಗಡು ಬಿನ್ನಾಣ ಉದ್ದಕ್ಕೂ ಪ್ರಸ್ತಾಪವಾಗಿದೆ. ಗ್ರಾಮೀಣ ಪ್ರೇಮಿಯಾಗಿದ್ದಾರೆ. ಎರೇಸೀಮೆಯವರು. ಚೆನ್ನಪ್ಪ ಹೆಸರು ಅವರ ಪಾಂಡಿತ್ಯವನ್ನು ಸಾಂಕೇತಿಸಿದರೆ, ಎರೇಸೀಮೆ ಅವರ ಜಾನಪದ ಪಾಂಡಿತ್ಯವನ್ನು ಸಾಂಕೇತಿಸುತ್ತದೆ. ನನಗೆ ಅವರ ಬಗ್ಗೆ ಆತ್ಮೀಯತೆ ಇದ್ದಂತೆ, ಗೌರವವೂ ಇತ್ತು" ಎಂದು ಹೇಳಿದರು.

ನನ್ನ ಕಥೆ

ಪಂಡಿತ ಚೆನ್ನಪ್ಪ ಎರೇಸೀಮೆ

ಪಂಡಿತ ಚೆನ್ನಪ್ಪ ಎರೇಸೀಮೆಯವರ ಅನುವಾದಿತ ಮಹಾಕವಿ ಷಡಕ್ಷರಿ ವಿರಚಿತ 'ಬಸವರಾಜ ವಿಜಯಂ' ಮರುಮುದ್ರಣ ಕೃತಿಯನ್ನು ಲೋಕಾರ್ಪಣೆ ಮಾಡಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ನಾಡೋಜ ಡಾ. ಮನುಬಳಿಗಾರ್ ಅವರು ಮಾತನಾಡಿ "ಕಠಿಣವಾದ ಕೃತಿಯನ್ನು ಸರಳವಾಗಿ ಗದ್ಯನುವಾದ ಮಾಡಿದ್ದಾರೆ. ಶ್ರೀ ಜಿ. ನಾರಾಯಣ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಎರೇಸೀಮೆ ಅವರಿಂದ ಅನುವಾದ ಮಾಡಿಸಿ ದೊಡ್ಡ ಉಪಕಾರ ಮಾಡಿದ್ದಾರೆ. ಮತ್ತೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣ ವಾಗುತ್ತಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು. ಕನ್ನಡ ಸಾಹಿತಿಗಳಲ್ಲಿ ಪ್ರಮುಖರಾಗಿದ್ದಾರೆ. ಇದೊಂದು ಸಾಹಿತ್ಯವನ್ನು ಶ್ರೀಮಂತಗೊಳಿಸಿದವರಲ್ಲಿ ಎರೇಸೀಮೆಯವರು ಪ್ರಸಿದ್ಧ ಪ್ರತಿಯೊಬ್ಬರು ಓದಬೇಕಾದ ಅತ್ಯಮೂಲ್ಯ ಗ್ರಂಥ' ಎಂದು ಹೇಳಿದರು.

ಬಸವರಾಜ ವಿಜಯಂ

ಡಾ. ಮನುಬಳಿಗಾರ್ ಅವರಿಂದ 'ಬಸವರಾಜ ವಿಜಯಂ' ಕೃತಿ ಪರಿಚಯ

ಪರಮಪೂಜ್ಯ ಲಿಂ. ಉದ್ದಾನ ಶಿವಯೋಗಿಗಳು ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನವನ್ನು ಕಟ್ಟಿಕೊಟ್ಟ ಅಮೂಲ್ಯ ಗ್ರಂಥ 'ಉದ್ದಾನೇಶ ಚರಿತೆ'ಯನ್ನು ಕುರಿತು ಮಾತನಾಡಿದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರಾದ ಶ್ರೀ ಕೋ.ರಂ. ಬಸವರಾಜು ಅವರು "ಎರೇಸೀಮೆಯವರು ಉದ್ದಾನೇಶ ಚರಿತೆ'ಯನ್ನು ಬರೆಯುವುದರ ಜೊತೆಗೆ ಶ್ರೀ ಟಿ.ಆರ್. ಮಹಾದೇವಯ್ಯನವರ ಜೊತೆ ಸೇರಿ ಸಂಪಾದಿಸಿಕೊಟ್ಟ 'ಸಿದ್ಧಗಂಗಾಶ್ರೀ' ಒಂದು ಅದ್ಭುತವಾದ ಗ್ರಂಥ.

ಶ್ರೀ ಕೋ.ರಂ. ಬಸವರಾಜು ಅವರಿಂದ 'ಉದ್ದಾನೇಶ ಚರಿತೆ' ಕೃತಿ ಪರಿಚಯ







ಉದ್ದಾನೇಶ ಚರಿತೆಯಲ್ಲಿ ನಮಗೆ ಕವಿದರ್ಶನವಾಗುತ್ತದೆ. ಇದೊಂದು ಬಹುಕಾಲ ಉಳಿಯುವಂತಹ ಅತ್ಯಮೂಲ್ಯ ಕೃತಿ' ಎಂದು ಹೇಳಿದರು.

ಕನ್ನಡ ಸಾಹಿತ್ಯ ಲೋಕಕ್ಕೆ ಚೆನ್ನಪ್ಪ ಎರೇಸೀಮೆ ಅವರ ಕೊಡುಗೆಯನ್ನು ಕುರಿತು ಮಾತನಾಡಬೇಕಾಗಿದ್ದ ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಓ.ಎಲ್. ನಾಗಭೂಷಣ ಸ್ವಾಮಿ ಅವರ ಗೈರು ಹಾಜರಿಯಲ್ಲಿ ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎಂ.ಜಿ. ಸಿದ್ಧರಾಮಯ್ಯ ಅವರು ಶ್ರೀ ನಾಗಭೂಷಣಸ್ವಾಮಿ ಸಿದ್ಧಪಡಿಸಿ ಕಳುಹಿಸಿದ್ದ ಭಾಷಣವನ್ನು ವಾಚಿಸಿದರು. ಅವರು ತಮ್ಮ ಭಾಷಣದಲ್ಲಿ ನಾನು ಚಿತ್ರದುರ್ಗದಲ್ಲಿ ಎರೇಸೀಮೆಯವರ ಶಿಷ್ಯನಾಗಿದ್ದೆ. ಕನ್ನಡ ಕಲಿಸಿದ ಗುರು ಎಂದು ಸ್ಮರಿಸಿಕೊಂಡು, ಅವರು ಮಾಡುತ್ತಿದ್ದ ಕನ್ನಡ ಪಾಠಗಳು ಜೀವಂತವಾಗಿತ್ತು. ಕನ್ನಡ ಉತ್ತಮ ಆತ್ಮಕಥೆಗಳಲ್ಲಿ 'ನನ್ನಕಥೆ' ಒಂದಾಗಿದೆ. ೨೦ನೇ ಶತಮಾನದ ಪೂರ್ವದ ಕಥೆಯನ್ನು 'ನನ್ನ ಕಥೆ'ಯಲ್ಲಿ ಕಟ್ಟಿಕೊಟ್ಟಿದ್ದಾರೆ. ಅವರೊಬ್ಬ ಶ್ರೇಷ್ಠ ವಿದ್ವಾಂಸರು ಎಂದು ತಮ್ಮ ಲಿಖಿತಭಾಷಣದಲ್ಲಿ ವ್ಯಕ್ತಪಡಿಸಿದ್ದಾರೆ.



ಬೇಲಿಮಠದ ಶ್ರೀಗಳಿಂದ ನುಡಿ ಗೌರವ

ಶಿವಾನುಭವಚರಮೂರ್ತಿ ಪರಮಪೂಜ್ಯ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರು ಎರೇಸೀಮೆಯವರ ಘನವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುತ್ತಾ "ನಮ್ಮ ನೆನಪಿನಲ್ಲಿ ಸದಾ ಸಂಪೂರ್ಣವಾಗಿ ಸೇರಿದವರು ಚನ್ನಪ್ಪ ಎರೇಸೀಮೆಯವರು. ಈ ಸಮಾರಂಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಗಣ್ಯರು ಬಂದಿರುವುದನ್ನು ನೋಡಿದರೆ ಎರೇಸೀಮೆಯವರ ವ್ಯಕ್ತಿತ್ವ ಎಂತವರು ಎಂಬುದು ಅರ್ಥವಾಗುತ್ತದೆ. ಅವರ ಸಾಧನೆ ಅನುಪಮವಾದುದು. ಅವರು ತಮ್ಮ ಅಧ್ಯಯನಶೀಲ ಪ್ರವೃತ್ತಿಯಿಂದ ಎಲ್ಲವನ್ನು ಅರಗಿಸಿಕೊಂಡು ತಮ್ಮ ಕೃತಿಗಳಲ್ಲಿ ಅನಾವರಣಗೊಳಿಸಿದ ಅದ್ಭುತಶಕ್ತಿ ಚನ್ನಪ್ಪನವರಿಗಿತ್ತು. ಅವರು ಹೃದಯದಿಂದ ಅರಳಿದವರು. ಅವರ ಪಾಂಡಿತ್ಯ ಹೃದಯದಿಂದ ಅನುಭಾವದ ನೆಲೆಯಲ್ಲಿ ಅರಳಿತ್ತು. ಕನ್ನಡ ಆಳವನ್ನು ಮುಟ್ಟಲು ಪ್ರೇರಣೆ ಕೊಟ್ಟವರು. ಚನ್ನಪ್ಪನವರ ಬರವಣಿಗೆಯಲ್ಲಿ ಬೆಳಕನ್ನು ಕಾಣುತ್ತೇವೆ" ಎಂದು ಹೇಳಿದರು.

ವಿಶ್ರಾಂತ ಕನ್ನಡ ಪಂಡಿತರೂ, ಪಂ. ಚನ್ನಪ್ಪ ಎರೇಸೀಮೆಯವರ ಸಹೋದರರಾದ ಪಂಡಿತ ವಿರೂಪಾಕ್ಷಪ್ಪ ಎರೇಸೀಮೆಯವರು ತಾವು ಅನುಭವಿಸಿದ ಬಡತನ, ಅಣ್ಣ ಚೆನ್ನಪ್ಪನವರು ತಮ್ಮ ಭವಿಷ್ಯ ರೂಪುಗೊಳ್ಳಲು ನೀಡಿದ ಸಹಾಯ, ಎಲ್ಲವನ್ನು ಸ್ಮರಿಸಿಕೊಂಡರು. ತಮ್ಮ ಹಾಗೂ ಅಣ್ಣನ ನಡುವಿನ ಅವಿನಾಭಾವ ಸಂಬಂಧವನ್ನು ಎಳೆಎಳೆಯಾಗಿ ಬಿಚ್ಚಿಟ್ಟರು. ಅಣ್ಣನೇ ನನಗೆ ಆದರ್ಶ, ಗುರು ಎಲ್ಲವೂ ಅವರೇ ಆಗಿದ್ದರು ಎಂದು ಭಾವುಕರಾಗಿ ಹೇಳಿದರು.



ಪಂಡಿತ್ ವಿರೂಪಾಕ್ಷಪ್ಪ ಎರೇಸೀಮೆಯವರಿಂದ ಕೃತಜ್ಞತಾ ನುಡಿ



ಶ್ರೀ ಹೀ.ಚಿ. ಶಾಂತವೀರಯ್ಯ ಅವರಿಗೆ 'ಪಂಡಿತ ಚೆನ್ನಪ್ಪ ಎರೇಸೀಮೆ' ಪ್ರಶಸ್ತಿ ಪ್ರದಾನ

ಮೊಟ್ಟಮೊದಲ 'ಪಂಡಿತ ಚೆನ್ನಪ್ಪ ಎರೇಸೀಮೆ' ಪ್ರಶಸ್ತಿಯನ್ನು ಹಿರಿಯ ವಿದ್ವಾಂಸ, ನಿಘಂಟು ತಜ್ಞ ಶ್ರೀ ಹೀ.ಚಿ. ಶಾಂತವೀರಯ್ಯ ಅವರಿಗೆ ಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಪ್ರದಾನ ಮಾಡಲಾಯಿತು. ಪ್ರಶಸ್ತಿ ಸ್ಮರಣಿಕೆ, ಪ್ರಶಸ್ತಿಪತ್ರ ಹಾಗೂ ೨೫ ಸಾವಿರ ರೂ.ಗಳನ್ನು ಒಳಗೊಂಡಿದೆ. ಪ್ರಶಸ್ತಿ ಸ್ವೀಕರಿಸಿ ಕೃತಜ್ಞತಾ ನುಡಿಗಳನ್ನಾಡಿದ ಶ್ರೀ ಹೀ.ಚಿ. ಶಾಂತವೀರಯ್ಯನವರು "ನಾನು ಚೆನ್ನಪ್ಪ ಎರೇಸೀಮೆಯವರ ಶಿಷ್ಯನೆಂದು ಹೇಳಿಕೊಳ್ಳಲು ಹೆಮ್ಮೆ ಎನಿಸುತ್ತದೆ. ನಿಘಂಟಿನಲ್ಲಿ ಸೇವೆ ಸಲ್ಲಿಸುವ ಸಂದರ್ಭದಲ್ಲಿ ಅನೇಕ







ಕ್ಲಿಷ್ಟಪದಗಳಿಗೆ ಉತ್ತರ ಪಡೆಯಲು ಭೇಟಿ ಮಾಡುತ್ತಿದ್ದ ಸಂದರ್ಭ, ಅವರು ಕಠಿಣ ಶಬ್ದಗಳಿಗೆ ನೀಡುತ್ತಿದ್ದ ಅರ್ಥಗಳು, ಎಲ್ಲವನ್ನು ಸ್ಮರಿಸಿಕೊಂಡರು. ಪಂಡಿತ ಶಬ್ದಕ್ಕೆ ಒಂದು ಮಹತ್ವವನ್ನು, ಮೌಲ್ಯವನ್ನು ತಂದುಕೊಟ್ಟವರು ಶ್ರೀ ಎರೇಸೀಮೆಯವರು. ಅವರೊಬ್ಬ ಪ್ರತಿಭಾವಂತ ಪಂಡಿತರಾಗಿದ್ದರು" ಎಂದು ಹೇಳಿದರು. ಪ್ರಶಸ್ತಿ ವಾಚನವನ್ನು ತುಮಕೂರಿನ ಶ್ರೀ ಕುಮಾರಸ್ವಾಮಿ ಮಾಡಿದರು.



ಶ್ರೀ ಜಯವಿಭುಸ್ವಾಮಿ ಅವರಿಂದ ಕೃತಜ್ಞತಾ ನುಡಿ

ಇದೇ ಸಂದರ್ಭದಲ್ಲಿ ಜನ್ಮಶತಮಾನೋತ್ಸವ ಸಮಾರಂಭ ಯಶಸ್ವಿಯಾಗಲು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಹಕಾರ ನೀಡಿದವರನ್ನು ಶ್ರೀ ಚೆನ್ನಪ್ಪ ಎರೇಸೀಮೆಯವರ ಪುತ್ರರೂ, ರಾಮನಗರ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಜಯವಿಭವ ಸ್ವಾಮಿಯವರು ಕೃತಜ್ಞತೆಗಳನ್ನು ಸಲ್ಲಿಸಿದರು.



ಸಚಿವ ಶ್ರೀ ವಿ. ಸೋಮಣ್ಣನವರಿಂದ ನುಡಿ ಗೌರವ

ಪಂಡಿತ ಚೆನ್ನಪ್ಪ ಎರೇಸೀಮೆ ಅವರ ಸಾಹಿತ್ಯ ಸಂಚಯ 'ವೆಬ್‌ಸೈಟ್'ನ್ನು ಲೋಕಾರ್ಪಣೆ ಮಾಡಿದ ಕರ್ನಾಟಕ ಸರ್ಕಾರದ ವಸತಿ ಸಚಿವರೂ, ಮೈಸೂರು ಜಿಲ್ಲೆ ಉಸ್ತುವಾರಿ ಸಚಿವರೂ ಆದ ಶ್ರೀ ವಿ. ಸೋಮಣ್ಣನವರು ಮಾತನಾಡಿ "ಇದೊಂದು ಪುಣ್ಯ ಸಮಾರಂಭ. ಎರೇಸೀಮೆಯವರು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಸಾಧನೆ ಅಸಾಧಾರಣವಾದುದು. ಆಡುಮುಟ್ಟದ ಸೊಪ್ಪಿಲ್ಲ, ಎರೇಸೀಮೆಯವರು ಕೈಯಾಡಿಸದ ಸಾಹಿತ್ಯ ಪ್ರಕಾರವಿಲ್ಲ. ಅವರೊಬ್ಬ ಶ್ರೇಷ್ಠ ವಿದ್ವಾಂಸರಾಗಿದ್ದರು. ಅವರ ಪುತ್ರ ಶ್ರೀ ಜಯವಿಭುಸ್ವಾಮಿಯವರು ಒಬ್ಬ ದಕ್ಷ ಕೆ.ಎ.ಎಸ್. ಅಧಿಕಾರಿಯಾಗಿದ್ದು ಅವರು ಶ್ರೀ ಮಹದೇಶ್ವರ ಬೆಟ್ಟದ ಅಭಿವೃದ್ಧಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರಿಂದ ಮಹದೇಶ್ವರ ಬೆಟ್ಟದಲ್ಲಿ ಪ್ರಸಾದ, ನೀರಿನ ಸಮರ್ಪಕ ವ್ಯವಸ್ಥೆ ಮಾಡಲು ಸಾಧ್ಯವಾಯಿತು" ಎಂದು ಪ್ರಶಂಸಿಸಿದರು.



ಶ್ರೀ ಕಿರಣಕುಮಾರ್ ಅವರಿಂದ ನುಡಿನಮನ

ವೇದಿಕೆಯಲ್ಲಿ ಉಪಸ್ಥಿತರಿದ್ದ ಇಸ್ರೋ ಮಾಜಿ ಅಧ್ಯಕ್ಷರಾದ ಶ್ರೀ ಕಿರಣ್‌ಕುಮಾರ್ ಅವರು ಮಾತನಾಡಿ "ಪಂಡಿತ ಚೆನ್ನಪ್ಪ ಎರೇಸೀಮೆಯವರು ಕನ್ನಡ ನಾಡಿಗೆ ನೀಡಿದ ಕೊಡುಗೆ ಅಮೂಲ್ಯವಾದುದು" ಎಂದು ಪ್ರಶಂಸಿಸಿದರು.



ಸುತ್ತೂರು ಜಗದ್ಗುರುಗಳಿಂದ ಆಶೀರ್ವಚನ

ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿದ್ದ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ಉತ್ತರ ಕರ್ನಾಟಕದಲ್ಲಿ ಹುಟ್ಟಿದ್ದರೂ ಪ್ರಸಿದ್ಧರಾಗಿದ್ದು ದಕ್ಷಿಣ ಕರ್ನಾಟಕದಲ್ಲಿ. ವಿದ್ಯೆಗೆ, ಪ್ರತಿಭೆಗೆ, ವ್ಯಕ್ತಿತ್ವ ವಿಕಾಸಕ್ಕೆ ಬಡತನ ಅಡ್ಡಬರುವುದಿಲ್ಲ ಎಂಬುದಕ್ಕೆ ಎರೇಸೀಮೆಯವರು ನಿದರ್ಶನರಾಗಿದ್ದರು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪೂರ್ಣಕರುಣೆಯಿಂದ ಬೆಳೆದವರು. ದೊಡ್ಡ ವಿದ್ವಾಂಸರು, ಕೀರ್ತನೆಕಾರರು, ಏಳು ಬಣ್ಣ ಸೇರಿ ಬಿಳಿ ಬಣ್ಣವಾಗುವಂತೆ, ಏಳು ಸ್ವರಗಳು ಸೇರಿ ಸಂಗೀತವಾಗುವಂತೆ,


ಪರಮಪೂಜ್ಯ ಶ್ರೀ ಸುತ್ತೂರು ಜಗದ್ಗುರುಗಳು ಹಾಗೂ ಸಿದ್ಧಗಂಗಾ ಶ್ರೀಗಳವರಿಗೆ ಭಕ್ತಿಸಮರ್ಪಣೆ

ಏಳು ಜನ ಮಕ್ಕಳು ಸೇರಿ ಎರೇಸೀಮೆಯವರ ಜನ್ಮಶತಮಾನೋತ್ಸವ ಸಮಾರಂಭ ನಡೆಸುತ್ತಿದ್ದಾರೆ. ಇದೊಂದು ಅಭಿಮಾನಿಗಳು, ಕುಟುಂಬದವರು ಸೇರಿ ಮಾಡುತ್ತಿರುವ ಅಪೂರ್ವ ಸಮಾರಂಭ" ಎಂದು ಬಣ್ಣಿಸಿದರು.



ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಜ್ಯೋತಿ ಬೆಳಗಿಸಿ ಉದ್ಘಾಟಿಸಲಾಯಿತು.

ಕಾರ್ಯಕ್ರಮ ರೂಪಾ ಸಂಗಡಿಗರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಶ್ರೀಮತಿ ವೈ.ಸಿ. ಕಮಲಾ ಅವರು ಆಶಯ ನುಡಿಗಳನ್ನಾಡಿ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಜಯವಿಭುಸ್ವಾಮಿ ಅವರು ಶರಣು ಸಮರ್ಪಣೆ ಮಾಡಿದರು. ಶ್ರೀಮತಿ ಲೋಕೇಶ್ವರಿ ಪ್ರಭು ಹಾಗೂ ಶ್ರೀ ಪಿನಾಕಪಾಣಿ ಅವರು ಕಾರ್ಯಕ್ರಮವನ್ನು ನಿರೂಪಿಸಿದರು.

ಕಾರ್ಯಕ್ರಮದ ನಂತರ ಖ್ಯಾತ ಹಿಂದೂಸ್ಥಾನಿ ಗಾಯಕಿ ಶ್ರೀಮತಿ ಸಂಗೀತಾ ಕಟ್ಟಿ ಕುಲಕರ್ಣಿ ಅವರಿಂದ ಸಂಗೀತ ಕಾರ್ಯಕ್ರಮ ನಡೆಯಿತು.

ಕಾರ್ಯಕ್ರಮ ಪ್ರಾರಂಭವಾಗುವುದಕ್ಕಿಂತ ಮುನ್ನ ಪಂಡಿತ ಚೆನ್ನಪ್ಪ ಎರೇಸೀಮೆ ವಿರಚಿತ 'ಉದ್ದಾನೇಶ ಚರಿತೆ' ಕೃತಿಯ ಆಯ್ದ ಭಾಗಗಳನ್ನು ತುಮಕೂರಿನ ಶ್ರೀಮತಿ ಲಕ್ಷ್ಮೀ ಜಯಪ್ರಕಾಶ ಅವರು ವಾಚನ ಮಾಡಿದರು. ಶ್ರೀ ಕೊ.ರಂ. ಬಸವರಾಜು ಅವರು ವ್ಯಾಖ್ಯಾನ ಮಾಡಿದರು.

ಕೇರಳದಲ್ಲಿ ಮಲಯಾಳಿಯಂತೆ, ಆಂಧ್ರದಲ್ಲಿ ತೆಲುಗಿನಂತೆ,
ತಮಿಳುನಾಡಿನಲ್ಲಿ ತಮಿಳಿನಂತೆ, ಕರ್ನಾಟಕದಲ್ಲಿ ಕನ್ನಡ
ಪ್ರಥಮ ಭಾಷೆಯಾಗದಿದ್ದರೆ,
ಕನ್ನಡವೇ ಶಿಕ್ಷಣ ಮಾಧ್ಯಮವಾಗದಿದ್ದರೆ,
ಕನ್ನಡಿಗರ ಬಾಳು ಕುಂಠಿತವಾಗುತ್ತದೆ.



– ಕುವೆಂಪು



# ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ತುಮಕೂರು ರಸ್ತೆ ಮೇಲುಸೇತುವೆಗೆ ಪೂಜ್ಯ ಶ್ರೀ ಶ್ರೀಗಳವರ ಹೆಸರು ನಾಮಕರಣ

ಪದ್ಮಭೂಷಣ, ಕರ್ನಾಟಕ ರತ್ನ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಹೆಸರನ್ನು ಬೆಂಗಳೂರು ತುಮಕೂರು ರಸ್ತೆಯ ಗೊರಗುಂಟೆಪಾಳ್ಯದಿಂದ ಆರಂಭವಾಗಿ ಕೆನ್ನಮೆಟಲ್ ಕಾರ್ಖಾನೆ ಬಳಿ ಕೊನೆಗೊಳ್ಳುವ ಮೇಲುಸೇತುವೆ ಹಾಗೂ ಯಶವಂತಪುರ ವೃತ್ತದಿಂದ (ಸಂವಿಧಾನ ವೃತ್ತ) ಕೆನ್ನಮೆಟಲ್ ಕಾರ್ಖಾನೆವರೆಗಿನ ರಸ್ತೆಗೆ **"ಶ್ರೀ ಶ್ರೀ ಶ್ರೀ ಡಾ. ಶಿವಕುಮಾರ ಸ್ವಾಮೀಜಿ ರಸ್ತೆ"** ಎಂದು ಸೆಪ್ಟೆಂಬರ್ ೨೭ ರಂದು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಬೆಂಗಳೂರು ಮಹಾನಗರ ಪಾಲಿಕೆ ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ಅವರ ಉಪಸ್ಥಿತಿಯಲ್ಲಿ ಲೋಕಾರ್ಪಣೆ ಮಾಡಲಾಯಿತು.


ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಹಾಗೂ ಬೆಂಗಳೂರು ಮಹಾನಗರ ಪಾಲಿಕೆ ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ಅವರು ನಾಮಫಲಕಕ್ಕೆ ಪೂಜೆ ಸಲ್ಲಿಸುತ್ತಿರುವುದು

ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಮಾತನಾಡಿ 'ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಹೆಸರು ಅಜರಾಮರವಾಗಿರುವಂತೆ ಮಾಡಲು ಬೆಂಗಳೂರು ಮಹಾನಗರ ಪಾಲಿಕೆ ತುಮಕೂರು ರಸ್ತೆ ಹಾಗೂ ಮೇಲುಸೇತುವೆಗೆ ಪೂಜ್ಯರ ಹೆಸರು ನಾಮಕರಣ ಮಾಡುವ ಮೂಲಕ ಗೌರವ ಸೂಚಿಸಿರುವುದು ಶ್ಲಾಘನೀಯ. ಪೂಜ್ಯರ ಚಿಂತನೆಗಳನ್ನು ಮುಂದಿನ ಪೀಳಿಗೆಗೆ ಪರಿಚಯಿಸಲು ಬಿಬಿಎಂಪಿ ಉತ್ತಮ ಕೆಲಸ ಮಾಡಿದೆ" ಎಂದು ಹೇಳಿದರು.






ಮಹಾಪೌರರಾದ ಶ್ರೀಮತಿ ಗಂಗಾಂಬಿಕೆ ಮಲ್ಲಿಕಾರ್ಜುನ ಅವರು ಮಾತನಾಡಿ "ಸಮಾಜದ ಕಟ್ಟಕಡೆಯ ಮಗುವಿಗೂ ಶಿಕ್ಷಣ ದೊರೆಯಬೇಕೆನ್ನುವ ನಿಟ್ಟಿನಲ್ಲಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಪರಮಪೂಜ್ಯ ಸ್ವಾಮೀಜಿಯವರು ಎಂಟು ದಶಕಗಳಿಂದ ಅನ್ನ, ಅಕ್ಷರ, ಜ್ಞಾನ ನೀಡಿದ ತ್ರಿವಿಧ ದಾಸೋಹಿಗಳು. ಮಠದ ಪರಂಪರೆಯನ್ನು ವಿಶ್ವವಿಖ್ಯಾತಿಗಳಿಸಿದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಮಾಡಿದ ಅನನ್ಯ ಸೇವೆಯನ್ನು ಇಡೀ ದೇಶವೇ ಕೃತಜ್ಞತೆಯಿಂದ ಸ್ಮರಿಸುತ್ತಿದೆ. ಈ ರಸ್ತೆಗೆ ಪೂಜ್ಯರ ಹೆಸರನ್ನು ನಾಮಕಾರಣ ಮಾಡಿರುವುದು ನನ್ನ ಪುಣ್ಯ" ಎಂದು ಸಂತಸ ವ್ಯಕ್ತಪಡಿಸಿದರು.

ಇದೇ ಸಮಾರಂಭದಲ್ಲಿ ಬೆಂಗಳೂರು ಮಹಾನಗರ ಪಾಲಿಕೆ ಸದಸ್ಯ ಶ್ರೀ ವೇಲುನಾಯಕರವರು ಪೂಜ್ಯರ ಅನುಪಮ ಸೇವೆಯನ್ನು ಸ್ಮರಿಸಿದರು. ಸಮಾರಂಭದಲ್ಲಿ ಶಾಸಕ ಶ್ರೀ ಆರ್. ಮಂಜುನಾಥ್, ಬಿಬಿಎಂಪಿ ಸದಸ್ಯರಾದ ಶ್ರೀಮತಿ ಉಮಾದೇವಿ ನಾಗರಾಜ್, ಶ್ರೀ ಎನ್. ನಾಗರಾಜ್, ಶ್ರೀ ನರಸಿಂಹ ನಾಯಕ, ಶ್ರೀ ನಾಗಭೂಷಣ, ವಿಶೇಷ ಆಯುಕ್ತ ಶ್ರೀ ಲೋಕೇಶ, ಆರ್.ಆರ್. ನಗರ ವಲಯದ ಜಂಟಿ ಆಯುಕ್ತ ಶ್ರೀ ಎಚ್. ಬಾಲಶೇಖರ್, ಜಿಲ್ಲಾ ಪಂಚಾಯಿತಿ ಸದಸ್ಯ ಶ್ರೀ ಮರಿಸ್ವಾಮಿ, ಕಂಠೀರವ ಸ್ಟೂಡಿಯೋ ಮಾಜಿ ಅಧ್ಯಕ್ಷ ಶ್ರೀ ರುದ್ರೇಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

**ಗುಡಿ ಗೋಪುರ ಹೊಂಗಳಸಕೆ ಜೇಂಬೆಳಕಿನ ಕನ್ನಡ !**
**ನಮ್ಮೆಲ್ಲರ ಮೈ ಮನಸಿನ ಹೊಂಗನಸಿನ ಕನ್ನಡ**
– ಚೆನ್ನವೀರ ಕಣವಿ

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ, ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨



## ಶರಣಾಂಜಲಿ



### ಶ್ರೀ ಎನ್. ಸಚ್ಚಿದಾನಂದಮೂರ್ತಿಯವರು

ಉತ್ತಮ ಶಿಕ್ಷಕರಾಗಿ, ಪ್ರಾಚಾರ್ಯರಾಗಿ, ಸರಳತೆ, ಸಜ್ಜನಿಕೆ, ಪ್ರೀತಿ ವಿಶ್ವಾಸಗಳಿಗೆ ಹೆಸರಾದ ಶ್ರೀ ಎನ್. ಸಚ್ಚಿದಾನಂದಮೂರ್ತಿರವರು ದಿನಾಂಕ ೧೨-೧೦-೨೦೧೯ರ ಶನಿವಾರ ತಮ್ಮ ೮೦ನೇ ವಯಸ್ಸಿನಲ್ಲಿ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕು ಅಂಬಲಗೆರೆ ಗ್ರಾಮದ ಪಂಡಿತ್ ಎಂ. ನಂಜುಂಡಯ್ಯನವರ ಪುತ್ರರಾಗಿ ದಿನಾಂಕ ೨೩-೦೧-೧೯೪೦ರಂದು ಜನಿಸಿದ್ದರು. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯಲ್ಲಿ ಪ್ರೌಢಶಾಲಾ ಶಿಕ್ಷಕರಾಗಿ, ಡಿ.ಇಡಿ ಕಾಲೇಜಿನ ಪ್ರಾಚಾರ್ಯರಾಗಿ ಸಾವಿರಾರು ಮಕ್ಕಳಿಗೆ ಮಾರ್ಗದರ್ಶನ ಮಾಡಿದ್ದರು. ಶ್ರೀಮಠದ ಹಳೆಯ ವಿದ್ಯಾರ್ಥಿಗಳಾದ ಶ್ರೀಯುತರು ಶ್ರೀಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಭಕ್ತರಾಗಿದ್ದರು. ಸಿದ್ಧಗಂಗಾ ಮಾಸಪತ್ರಿಕೆಯ ಮಹಾಪೋಷಕರಾಗಿದ್ದರು.

ಶ್ರೀಯುತರು ಪತ್ನಿ, ಮೂರು ಜನ ಪುತ್ರಿಯರು, ಒಬ್ಬ ಪುತ್ರನನ್ನು ಹಾಗೂ ಅಪಾರವಾದ ಬಂಧು ಬಳಗವನ್ನು ಅಗಲಿದ್ದಾರೆ. ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

### ಶ್ರೀ ಎಸ್.ಜಿ. ಶಿವಣ್ಣನವರು

ಆದರ್ಶ ಶಿಕ್ಷಕರಾಗಿ, ಪ್ರಗತಿಪರ ರೈತರಾಗಿ, ಪ್ರೀತಿ, ವಿಶ್ವಾಸ, ಸರಳತೆಗೆ ಹೆಸರಾಗಿದ್ದ ಶ್ರೀ ಎಸ್.ಜಿ. ಶಿವಣ್ಣನವರು ದಿನಾಂಕ ೧೬-೧೦-೨೦೧೯ರ ಶನಿವಾರ ತಮ್ಮ ೮೭ ವಯಸ್ಸಿನಲ್ಲಿ ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ.

ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಶಿರಗನಹಳ್ಳಿಯಲ್ಲಿ ಲಿಂ. ಶ್ರೀಮತಿ ಅಕ್ಕಯ್ಯಮ್ಮ ಮತ್ತು ಶ್ರೀ ಗಂಗಪ್ಪನವರ ಸುಪುತ್ರರಾಗಿ ಜನಿಸಿದರು. ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡು ತಾಯಿಯ ಆರೈಕೆ ಮತ್ತು ಸಹೋದರ, ಸಹೋದರಿಯರ ಆರೈಕೆಯಲ್ಲಿ ಬೆಳೆದರು. ಮುಂದೆ ಮೂಗನಹಳ್ಳಿ ತಮ್ಮ ಅಕ್ಕನವರು ಮತ್ತು ಭಾವನರಾದ ಲಿಂ. ಶ್ರೀಮತಿ ಪುಟ್ಟಣಯಮ್ಮ ಮತ್ತು ಯಜಮಾನ್ ರೇವಣಸಿದ್ಧಪ್ಪನವರ ದತ್ತುಪುತ್ರರಾಗಿ ಬೆಳೆದು ಮುಂದೆ ಶಿಕ್ಷಕರಾಗಿ, ಮುಖ್ಯಶಿಕ್ಷಕರಾಗಿ ಸಹಸ್ರಾರು ಮಕ್ಕಳಿಗೆ ಮಾರ್ಗದರ್ಶನ ಮಾಡಿದ್ದರು. ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸದಸ್ಯರಾಗಿ, ಶ್ರೀಮಠದ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಪರಮಭಕ್ತರಾಗಿದ್ದರು.

ಶ್ರೀಮತಿ ಚನ್ನಬಸವಮ್ಮನವರನ್ನು ವಿವಾಹವಾದ ಶ್ರೀಯುತರಿಗೆ ತುಮಕೂರಿನ ಸಿದ್ಧಗಂಗಾ ಆಸ್ಪತ್ರೆಯ ವೈದ್ಯರಾದ ಡಾ॥ ಪರಮೇಶ್ ಸೇರಿದಂತೆ ಇಬ್ಬರು ಪುತ್ರರು ಹಾಗೂ ಇಬ್ಬರು ಪುತ್ರಿಯರನ್ನು ಅಗಲಿದ್ದಾರೆ. ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಹಾಗೂ ಅವರ ಅಗಲಿಕೆ ನೋವನ್ನು ಭರಿಸುವ ಶಕ್ತಿಯನ್ನು ಅವರ ಕುಟುಂಬವರ್ಗದವರಿಗೆ ಬಸವಾದಿ ಶರಣರು ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆ ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.







## ದಾನಿಗಳ ಪಟ್ಟಿ — ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೮೮೧. | ಶ್ರೀ ಬಸವರಾಜು ಸಿ. ಮಳೀಮಠ್<br>ರಾಣೆಬೆನ್ನೂರು | ೧೦,೦೦೦ |
| ೨೮೮೨. | ಶ್ರೀ ಸದಾಶಿವಪ್ಪ ವಿ. ಹಿರೇಮಠ<br>ರಾಣೆಬೆನ್ನೂರು | ೫,೦೦೦ |
| ೨೮೮೩. | ಶ್ರೀ ಮೊಹಮದ್ ರಫೀಕ್ ಆರ್ ಬಡಿಗೇರ್<br>ಹಾಲೂರ್ | ೫,೦೦೦ |
| ೨೮೮೪. | ಶ್ರೀ ವಿಜಯಕುಮಾರ್ ಮದಕನ್ನನವರ<br>ಹಾವೇರಿ | ೫,೦೦೦ |
| ೨೮೮೫. | ಶ್ರೀ ಎಫ್ ಯು ಪಾಟೀಲ್<br>ಗದಗ್ | ೧,೦೦೦ |
| ೨೮೮೬. | ಶ್ರೀ ಎ.ಎಂ. ಸಿರಸವಲಗ<br>ಬಸವನಬಾಗೇವಾಡಿ | ೫,೦೦೦ |
| ೨೮೮೭. | ಶ್ರೀಮತಿ ನಂದ ಪಿ. ಮರಡಿ<br>ಧಾರವಾಡ | ೧,೦೦೦ |
| ೨೮೮೮. | ಶ್ರೀ ನವೀನ್‌ಕುಮಾರ್ ಎಸ್. ಕಲಸಣ್ಣನವರ<br>ರಾಣೆಬೆನ್ನೂರು | ೫,೦೦೦ |
| ೨೮೮೯. | ಶ್ರೀ ಸಚಿಜಯ ಅಂಗಡಿ<br>ರಾಣೆಬೆನ್ನೂರು | ೫,೦೦೦ |
| ೨೮೯೦. | ಶ್ರೀ ಜೆ.ಬಿ. ಹರಿಹರ<br>ರಾಣೆಬೆನ್ನೂರು | ೨,೦೦೦ |
| ೨೮೯೧. | ಶ್ರೀ ಪ್ರದೀಪ್ ಕುಲಕರ್ಣಿ<br>ಹುಬ್ಬಳ್ಳಿ | ೧,೦೦೦ |
| ೨೮೯೨. | ಶ್ರೀ ಪ್ರಕಾಶ್ ರಾಮಚಂದ್ರಪ್ಪ ಸಂಗಲೋಡ್<br>ಅಣ್ಣಿಗೇರಿ | ೨,೦೦೦ |
| ೨೮೯೩. | ಶ್ರೀ ರವಿಗುಡಿಮನಿ<br>ಗದಗ | ೨,೦೦೦ |
| ೨೮೯೪. | ಶ್ರೀ ಎಸ್.ಜಿ. ಗೋಣಕರ್<br>ಹುಬ್ಬಳ್ಳಿ | ೧,೦೦೨ |
| ೨೮೯೫. | ಶ್ರೀ ಶಂಭು ಅನ್ವೇರಿ<br>ಹಂಸಬಾವಿ | ೫,೦೦೦ |
| ೨೮೯೬. | ಶ್ರೀ ಮಹೇಶ್ ಜಿ. ಕುಂಬಾರ್<br>ರಾಣೆಬೆನ್ನೂರು | ೩,೦೦೦ |
| ೨೮೯೭. | ಶ್ರೀ ಬಸವರಾಜ್ ಕೊಡ್ಲಿ ಗೌಡ್ರ<br>ರಾಣೆಬೆನ್ನೂರು | ೩,೦೦೦ |
| ೨೮೯೮. | ಶ್ರೀ ಶಿವಾನಂದ ಬ್ರಹ್ಮಯ್ಯ ಕೋಮಲಾಪುರ್<br>ದನಸೂರ್ | ೧,೦೦೦ |
| ೨೮೯೯. | ಶ್ರೀ ಸಂತೋಷ್ ಕುಪಸದ್<br>ಹುಬ್ಬಳ್ಳಿ | ೨,೦೦೦ |
| ೨೯೦೦. | ಶ್ರೀ ಮರಿಸ್ವಾಮಿ ಹಿರೇಮಠ<br>ಮರಿಹಳ್ಳಿ | ೫,೦೦೦ |
| ೨೯೦೧. | ಶ್ರೀ ಲಕ್ಷ್ಮಣ ಆರ್. ಸಾಲಿ<br>ಹುಬ್ಬಳ್ಳಿ | ೧,೦೦೦ |
| ೨೯೦೨. | ಶ್ರೀ ಬಿ.ಆರ್. ಚವಾಣ್<br>ಹುಬ್ಬಳ್ಳಿ | ೧,೦೦೦ |
| ೨೯೦೩. | ಶ್ರೀ ಮಂಜುನಾಥ ಆವೇರಿ<br>ಹುಬ್ಬಳ್ಳಿ | ೧,೦೦೦ |
| ೨೯೦೪. | ಶ್ರೀ ಆನಂದ ಯರಂಗಣಿ<br>ಹಣ್ಣಿಗೆರೆ | ೧,೦೦೦ |
| ೨೯೦೫. | ಶ್ರೀ ಎ. ಆನಂದಕುಮಾರ<br>ತುಮಕೂರು | ೧೦,೦೦೦ |
| ೨೯೦೬. | ಶ್ರೀ ಗಣೇಶ ಹೊನ್ನರಾಜ್‌ಜ್ಯೋತಿ<br>ಬೆಂಗಳೂರು | ೨,೨೫,೦೦೦ |
| ೨೯೦೭. | ಶ್ರೀ ಯತೀಶ<br>ತುಮಕೂರು | ೭೦,೦೦೦ |
| ೨೯೦೮. | ಶ್ರೀ ಎನ್. ಮಧುಕುಮಾರಯ್ಯ<br>ತುಮಕೂರು | ೨೫,೦೦೦ |
| ೨೯೦೯. | ಶ್ರೀ ಟಿ.ವಿ. ದೀಪಕ್<br>ತುಮಕೂರು | ೧೦,೦೦೦ |
| ೨೯೧೦. | ಶ್ರೀ ಎ.ಎಂ. ವಿಜಯಕುಮಾರ್<br>ತಿಪಟೂರು | ೫೦,೦೦೦ |
| ೨೯೧೧. | ಶ್ರೀ ಮಹೇಶ್<br>ಬೀದರ್ | ೪೦,೦೦೦ |
| ೨೯೧೨. | ಶ್ರೀ ಬಿ.ಆರ್. ರವಿಕುಮಾರ<br>ಶಿವಮೊಗ್ಗ | ೫೦,೦೦೦ |
| ೨೯೧೩. | ಶ್ರೀ ಇಂದ್ರನೀಲ ಪೋಪ್<br>ಭೂಪಾಲ್ | ೩೦,೦೦೦ |
| ೨೯೧೪. | ಶ್ರೀ ಕೆ.ಕೆ. ಕೃಷ್ಣಮೂರ್ತಿ<br>ಕೆರೆಗತ್ತಿಗನೂರ್ | ೫೦,೦೦೦ |

(ಮುಂದುವರೆಯುತ್ತದೆ)

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102
RNI No. 17139/69



To

If undelivered please return to :
Editor
Siddaganga Monthly Magazine
Siddaganga Math
Tumkur-572 104

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru-10. Ph : 23404232
email ID : geetanjaligraphics@gmail.com